Mar 92

# ಮಾನಸಿ

ತಿಂಗಳ ಪತ್ರಿಕೆ. ಮಾರ್ಚ್ ೧೯೯೨

ಸೀತೆಯಲ್ಲ ಅಭಾಗಿನಿ........... ನಾನು

ಕ್ಷಮಯಾ ಧರಿತ್ರಿ

ಅಪ್ಪ ಹಾಡಿದ ಹಾಡು

ಮಹಿಳಾ ಚಳವಳಿ ರಾಷ್ಟ್ರೀಯ ಚಳವಳಿ

ಉರಿವ ಇಳೆ ಊರ್ಮಿಳೆ

ಕರ್ನಾಟಕದಲ್ಲಿ ಮಹಿಳೆಯರ ಪ್ರಶ್ನೆ

# ಮಾನಸ

ಸಂಪುಟ: ೫ ಸಂಚಿಕೆ:೩

ಮಾರ್ಚ್ ೧೯೯೨

ಸಂಪಾದಕೀಯ ಮಂಡಳಿ :
ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ದು. ಸರಸ್ವತಿ,
ಸವಿತ ಎ., ಗೀತಾ ಜಿ. ಎಸ್., ಗಾಯಿತ್ರಿ ವಿ.

ಸಲಹೆ—ಸಹಕಾರ
ಇಳಾವಿಜಯ

ವಿಳಾಸ "ಮಾನಸ ತಿಂಗಳ ಪತ್ರಿಕೆ"
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

ಬಿಡಿಪ್ರತಿ:2 ರೂ.
ಸೂಚನೆ: ವಾರ್ಷಿಕ ಚಂದಾ:20ರೂ.
ಆಜೀವ ಚಂದಾ: 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


## ಈ ಸಂಚಿಕೆಯಲ್ಲಿ..........



# ಸಂಪಾದಕೀಯ

ಪುರುಷ ಪ್ರಧಾನ ಸಮಾಜದಲ್ಲಿ ಯಾವುದೇ ಹೆಣ್ಣು ಆ ಸಮಾಜದ ಎಲ್ಲಾ ತಂತ್ರಗಳನ್ನು ಮುರಿದೋ ಅಥವಾ ರೂಢಿಸಿಕೊಂಡೋ ತನ್ನದೇ ಅಸ್ತಿತ್ವ ಸ್ಥಾಪಿಸಿಕೊಂಡು ಹೆಸರು ಗಳಿಸಿದರೆ ಅಂತಹವರನ್ನು ಹೇಳ ಹೆಸರಿಲ್ಲದಂತೆ ಮಾಡಲು ಪುರುಷರ ಕೈಯಲ್ಲಿರುವ ಮಾಧ್ಯಮಗಳು ಬಳಸುವ ತಂತ್ರಗಳು ಹಲವಾರು. ಒಂದೋ ಆಕೆಯ ಸಂಬಂಧಗಳನ್ನು ಕೆದಕಿ ಆಕೆಯ ಚಾರಿತ್ರ್ಯವಧೆ ಮಾಡಲು ಬಯಸುತ್ತಾರೆ, ಇಂತಹ ಅಪವಾದಗಳಿಗೆ ಹೆಣ್ಣು ಮಕ್ಕಳು ಹೆದರುವರು ಎಂಬ ಅಂಶ ಅವರ ತಲೆಗಳಲ್ಲಿರುವುದರಿಂದ ಅವರಿಗೆ ಇದು ಸುಲಭ. ಇದಕ್ಕೂ ಬಗ್ಗದ ಹೆಂಗಸರಾದರೆ ಇಂತಹವರ ವ್ಯಕ್ತಿತ್ವದಲ್ಲಿ ಇಲ್ಲದಿರುವ ನ್ಯೂನತೆಗಳನ್ನು ಹುಡುಕಿ ಬಯಲು ಪಡಿಸಲು ನೋಡುತ್ತಾರೆ. ಉದಾ: ಇಳಾ ವಿಜಯ ಇವರ ಬಗ್ಗೆ ಲಂಕೇಶ್ ಪತ್ರಿಕೆ ಆಗ–ಈಗ ಪ್ರಕಟಿಸುವ ಬರಹಗಳನ್ನು ಗಮನಿಸಬಹುದು. ಕನ್ನಡದಲ್ಲಿ ವಾಕ್ಯ ರಚನೆ ಮಾಡಲು ಬಾರದವರು ಅಂತಲೋ ಅಥವಾ ಹಣ ಇತ್ಯಾದಿಗಳನ್ನು ನುಂಗಿರುವವರು ಅಂತಲೋ ಬರೆದು ಪ್ರಕಟಿಸುವುದರ ಮೂಲಕ ಅವರ ವ್ಯಕ್ತಿತ್ವದಲ್ಲಿ ಅವರಿಗಿರುವ ಅಥವಾ ಅವರ ಬಗ್ಗೆ ಇತರರಿಗಿರುವ ಪ್ರೀತಿ–ಭರವಸೆಯನ್ನು ಮುರಿಯಲು ಪ್ರಯತ್ನಿಸುತ್ತಾರೆ, ಇದು ಒಂದು ಉದಾಹರಣೆಯಷ್ಟೇ 'ಎಲ್ಲೋ ಅಡಗಿರುವ ಪೂರ್ವಾಗ್ರಹ ಪೀಡಿತ ಭಾವನೆಗಳು, ಪುರುಷ ಪ್ರಧಾನ ಮೌಲ್ಯಗಳು ರಾರಾಜಿಸುವುದು ಇಂತಹ ಕಡೆಗಳಲ್ಲಿಯೇ. ನಮ್ಮ ಬಗ್ಗೆ — ನಮ್ಮ ಸುತ್ತ–ಮುತ್ತಲಿನ ಹೆಣ್ಣುಮಕ್ಕಳ ಬಗ್ಗೆ ಕಾಳಜಿ ಇರುವ ನಾವುಗಳು ಇಂತಹ ಅಧಃಪತನಕ್ಕಿಳಿಸುವ ತಂತ್ರಗಳ ಬಗ್ಗೆ ಉಪೇಕ್ಷೆಯಿಂದಿರಬೇಕಲ್ಲದೇ ಸಾಧ್ಯವಾದಷ್ಟೂ ಇಂತಹ ಸಂಸ್ಕೃತಿಯನ್ನು ಹುಟ್ಟು ಹಾಕುವವರ ಬಗ್ಗೆ ಗುಮಾನಿಯಿಂದಲೇ ಇರಬೇಕಾಗುತ್ತದೆ. ಆರೋಗ್ಯಕರ ಭರವಸೆ ಹುಟ್ಟು ಹಾಕುವ ಸಂಸ್ಕೃತಿಯನ್ನು, ಸಾಧ್ಯತೆಗಳನ್ನು ನಾವು ಸೃಷ್ಟಿಸುವುದು ಇಂದಿನ ಸಂದರ್ಭದಲ್ಲಿ ತೀರಾ ಅಗತ್ಯವಾದ ವಿಚಾರವಾಗಿದೆ,

# ಸೀತೆಯಲ್ಲ ಅಭಾಗಿನಿ..........ನಾನು.

ಸ್ಥಳ: ಅಯೋಧ್ಯೆ.

ಪಾತ್ರಗಳು:

| | |
|---|---|
| ಕೈಕೇಯಿ | ಶ್ರೀ ರಾಮಚಂದ್ರ |
| ಸುರಮೆ | ಭರತ |

(ಕೈಕೇಯಿಯ ಅಂತಃಪುರದಲ್ಲಿ ಕೈಕೇಯಿ ಪಲ್ಲಂಗದ ಮೇಲೆ ಮಲಗಿದ್ದಾಳೆ. ಅವಳಿಗೆ ಗಾಳಿ ಹಾಕುತ್ತಾ ಅವಳ ಬಲ ಮಗ್ಗುಲಲ್ಲಿ ದಾಸಿ ಸುರಮೆ.)

"ಕೈಕೇಯಿ: ಏನಿದು? ಏಳುತ್ತಿದ್ದಂತೆಯೇ ನನ್ನ ಬಲಗಣ್ಣು ಅದುರುತ್ತಿದೆ? ಕುಲಘಾತಕಿಯಾದ ನಾನು ಮತ್ತೇನು ಅಮಂಗಳ ಅನುಭವಿಸಲಿದೆಯೋ........."

ಸುರಮೆ: (ಕಳವಳದಿಂದ) ದೇವಿ

ಕೈಕೇಯಿ: (ಎದ್ದು ಕುಳಿತು ಅವಳ ಕೈ ಹಿಡಿದು) ಸುರಮೆ, ನನ್ನ ಬಲಗಣ್ಣು ಅದುರುತ್ತಿದೆಯಲ್ಲೇ. ಅಲ್ಲದೆ ಏಳುತ್ತಿದ್ದಂತೆಯೇ ಇಂದೇಕೋ ನನ್ನ ಮನ ಈ ಘೋರ ದಿನವನ್ನು ನೆನೆಸುತ್ತಿದೆ. ಅಂದು ಹೀಗೆಯೇ ಗಾಢನಿದ್ದೆಯಲ್ಲಿದ್ದೆ. ನನ್ನ ಪಾಲಿನ ವಿಧಿ ಮಂಥರೆಯನ್ನು ನನ್ನ ಬಳಿ ಕಳುಹಿಸಿ ನನ್ನ ಪತಿಯನ್ನು ಕಸಿದುಕೊಂಡಿತು......... ಚೆನ್ನಾಗಿ ನೆನಪಿದೆ ನನಗೆ......ಮೊದಲು ನನ್ನ ಹೃದಯ ಹಿಗ್ಗಿನಿಂದ ಅರಳಿತ್ತು. ಮುದ್ದುಗುವರ ರಾಮನ ಪಟ್ಟಾಭಿಷೇಕದ ವಾರ್ತೆ ಕೇಳಿ......... ಆದರೆ ನೀಚ ಮಂಥರೆ ಅರಳಿದ ಹೂವಿನ ನಡುವೆ ವಿಷದ ಕೀಟ ಹೊಕ್ಕಿಸಿದಳು.......... ಇಲ್ಲ, ಇಲ್ಲ, ಮಂಥರೆಯನ್ನು ದೂಷಿಸಲಾಗದು. ನನ್ನ ಹೃದಯದಲ್ಲಿ ಅಡಗಿ ಕುಳಿತಿದ್ದ ಸ್ವಾರ್ಥ, ಅಲ್ಪತನಗಳು ಆ ಕೀಟವನ್ನು ಅಪ್ಪಿ ಕರೆದುಕೊಂಡವು......... ಹು ನನ್ನ ಹೃದಯದಲ್ಲಿ ಆ ಕೀಟಗಳಿಲ್ಲದಿದ್ದರೆ ಮಂಥರೆಯ ಕೀಟ ದೃಢತೆಯ ಕೋಟೆಯನ್ನೊಡೆದು ಒಳಗೆ ಪ್ರವೇಶಿಸಲಾಗುತ್ತಿತ್ತೆ? ಮಿಣುಕಿದ ಸ್ವಾರ್ಥದ ಕಿಡಿ ಹತ್ತಿ ಉರಿದು ಜ್ವಾಲೆಯಾಗಿ ಪ್ರಿಯತಮನನ್ನು ಸುಟ್ಟು ಬೂದಿಮಾಡಿ, ಮಗನ ತಿರಸ್ಕಾರಕ್ಕೆ ನನ್ನನ್ನು ಗುರಿಮಾಡಿ, ಜನರ ನಿಂದೆಗೆ ನನ್ನನ್ನು ಪಾತ್ರಳನ್ನಾಗಿಸಿ ನನ್ನ ಮಂಗಳ ಜೀವನದಲ್ಲಿ ಅಮಂಗಳದ ಹೊಲಸನ್ನೆಸೆದು ಇಡೀ ಅಯೋಧ್ಯೆಯನ್ನೇ ಹದಿನಾಲ್ಕು ವರ್ಷ ಕತ್ತಲೆಯಲ್ಲಿ ಮುಳುಗಿಸಿತಲ್ಲವೇ. ರಾಮಚಂದ್ರನೇನೋ ಹಿಂತಿರುಗಿ ಬಂದ ಅಯೋಧ್ಯೆಯ ಜನರೂ ಮತ್ತೆ ನಲಿದರು. ಆದರೆ ನನ್ನ ಮುಖದ ಮಸಿ ಅಳಿಸಲಾರದ ಮಸಿ ಮುಂಬರುವ ಪೀಳಿಗೆಯವರು ಬೆಟ್ಟು ಮಾಡಿ ತೋರುವ ಚಾರಿತ್ರ್ಯ..........(ಬಿಕ್ಕಳಿಸಿ ಅಳುವಳು)

ಸುರಮೆ:— (ಬೆದರಿ) ತಾಯಿ ಏನಾಗಿದೆ ನಿಮಗೆ ಇಂದು?......

ಸಮಾಧಾನ ಮಾಡಿಕೊಳ್ಳಿ......ಕಳೆದದ್ದನ್ನು ಕುರಿತು ಈಗ ಚಿಂತಿಸುವುದೇಕೆ? ಮಾಗಿದ ಗಾಯವನ್ನು ಕೆದರುವುದೇಕೆ?

ಕೈಕೇಯಿ: ನನ್ನ ಮನವೇಕೋ ಇಂದು ಕಲ್ಲು ಬಿದ್ದ ಕೊಳವಾಗಿದೆ...... ಇಲ್ಲ ಸುರಮೆ ನಿನಗೆ ತಿಳಿಯದು ನನ ಹೃದಯದ ಗಾಯ ಮಾಗಿಲ್ಲ. ಮಾಗುವುದೂ ಇಲ್ಲ......ನಿನಗೆ ತಿಳಿಯದು ಸುರಮೆ. ಅಭಿಮಾನಿ ವ್ಯಕ್ತಿಗೆ ತನ ಬಗ್ಗೆ ತನಗೆ ತಿರಸ್ಕಾರ ಮೂಡಿದಾಗ, ಬಿಸಿತುಪ್ಪ ನುಂಗಲಾರದೆ ಬಾಯಿಯಲ್ಲಿಟ್ಟುಕೊಂಡ ಪರಿಸ್ಥಿತಿಯಾಗುತ್ತದೆ. ರಾಮಚಂದ್ರ ಅಂದು ಕಾಡಿಗೆ ಹೋಗುವ ಮುನ್ನ "ಹೋಗಿ ಬರುವೆ ತಾಯಿ" ಎಂದು ನಗು ಮೊಗದಿಂದ ನುಡಿದಾಗ ನನ್ನ ಮನ ನಾಚಿಕೆಯಿಂದ, ಪಶ್ಚಾತ್ತಾಪದಿಂದ ಮುದುಡಿ ಹೋಯಿತು ಆದರೆ ದುರಭಿಮಾನದ ಕೋಟೆ ನನ್ನ ಮನದ ಸಾತ್ವಿಕತೆಯನ್ನು ಸುತ್ತುವರೆದು ನಿಂತಿತ್ತು. ಅಂದಿನಿಂದ

ಇಂದಿನವರೆಗೆ ಅದೇ ಕ್ಷೋಭೆ, ಅದೇ ಪರಿತಾಪ, ಆದರೆ ಧೈನ್ಯತೆಯಿಂದ ನಾನು "ಕಳಂಕಿನಿ" ಎಂದು ಹೇಳಿಕೊಳ್ಳಲಾಗದ ದುರಭಿಮಾನ, ಈ ತಿಕ್ಕಾಟದಲ್ಲಿ ನಾನು ಬೆಂದು ಹೋಗಿದ್ದೇನೆ, ಸುರಮೆ, ಬೆಂದು ಹೋಗಿದ್ದೇನೆ.

ಸುರಮೆ: ತಾಯಿ ಸಮಾಧಾನಿಸಿಕೊಳ್ಳಿ........ ಅಂದೊಮ್ಮೆ ನೀವೇ ಹೇಳಿದಿರಲ್ಲವೇ? ಇಂಥ ನಿಮ್ಮ ಮನದಲ್ಲಿ ಕೇವಲ ಪ್ರೇಮಗಂಗೆ ಹರಿಯುತ್ತಿರುವಳೆಂದು;

ಕೈಕೇಯಿ: ಹೌದು ಸುರಮೆ ನನಗೆ ಅದೇ ಹೆದರಿಕೆ. ಆ ಪ್ರೇಮಗಂಗೆ ಮತ್ತೆ ಕದಡಿ ಎಲ್ಲಿ ಹೊಲಸಾಗುವಳೋ ಎಂದು. ನನಗಂತೂ ನನ್ನ ಅಲ್ಪತನಕ್ಕೆ, ಸ್ವಾರ್ಥಕ್ಕೆ ಶಿಕ್ಷೆ ಮುಗಿಯಿತೆನ್ನಿಸುವುದಿಲ್ಲ......ಇಲ್ಲ ಸುರಮೆ ನನ್ನ ಅಂತರಂಗ ಹೇಳುತ್ತಿದೆ ನಾನಿನ್ನೂ ದೊಡ್ಡ ಬೆಲೆ ತೆರಬೇಕಾಗಿದೆ. (ಚಿಂತಾಕ್ರಾಂತಳಾಗಿ ಸ್ವಲ್ಪ ಹೊತ್ತು ಮೌನ...... ಮತ್ತೆ ಎಚ್ಚೆತ್ತು) ಅದಿರಲಿ, ಇನ್ನೂ ಸೀತಾರಾಮರು ಬಂದಿಲ್ಲವೇಕೆ? ರಾಮಚಂದ್ರನ ಮಸ್ತಕದ ಮೇಲೆ ನಾನು ಇಷ್ಟು ಹೊತ್ತಿಗೆ ಕೈಯಿಟ್ಟು ಹರಸಿ ಎಷ್ಟೋ ವೇಳೆಯಾಗಿರಬೇಕಾಗಿತ್ತಲ್ಲ...... ಭರತ ಶತ್ರುಘ್ನ ಲಕ್ಷ್ಮಣರಾದರೂ ಏನು ಮಾಡುತ್ತಿರುವರೋ. ಹೋಗಿ ನೋಡಿ ಬರುವೆಯಾ ಸುರಮೆ? (ಸುರಮೆ ಹೊರಡಲನುವಾಗುವಳು...... ಅಷ್ಟರಲ್ಲಿ ಕಹಳೆಯ ಸದ್ದು) ಬೇಡ ಬೇಡ ಬರುತ್ತಿದ್ದಾನೆ. ಬರುತ್ತಿದ್ದಾನೆ, ರಘುಕುಲ ತಿಲಕ (ಸಡಗರದಿಂದ ಮೇಲೆದ್ದು ಹೊರಗೆ ನೋಡುತ್ತಾ) ಭರತ ಅವನ ಪಕ್ಕದಲ್ಲಿದ್ದಾನೆ......ಆದರೆ ಸುರಮೆ ನೋಡು ರಾಮಚಂದ್ರನ ಮುಖ ಕಂದಿಲ್ಲವೇ? ತಲೆ ಎತ್ತಿ, ಎದೆಯುಬ್ಬಿಸಿ ರಾಜಸಿಂಹನಂತೆ ಧೀರನಾಗಿ ನಡೆಯುತ್ತಿದ್ದ ಅವನು ಇಂದೇಕೋ ಹುಬ್ಬು ಗಂಟಿಕ್ಕಿ, ತಲೆ ತಗ್ಗಿಸಿ, ನೋವು ಅನುಭವಿಸುತ್ತಿರುವ ಗಜರಾಜನಂತೆ ಬರುತ್ತಿರುವುದಾದರೂ ಏಕೆ?

ಸುರಮೆ:— (ನೋಡಿ) ಹೌದು ತಾಯಿ ಪ್ರಭುಗಳು ಎಂದಿನಂತಿಲ್ಲ......ಸೀತಾದೇವಿಯವರು ಅವರೊಡನಿಲ್ಲ...,.. ಭರತ ಕುಮಾರರೂ ತಲೆ ತಗ್ಗಿಸಿದ್ದಾರೆ.

(ರಾಮನ ಪ್ರವೇಶ, ಕೈಕೇಯಿಗೆ ತಲೆಬಾಗಿ ವಂದಿಸುತ್ತಾ)

ಶ್ರೀ ರಾಮ: ತಾಯಿ ಕೌಸಲ್ಯ ಪುತ್ರನು ಆಶೀರ್ವಾದ ಬೇಡುತ್ತಿದ್ದಾನೆ.

ಕೈಕೇಯಿ: (ತುಸುಕನಲಿ) ಏನು ರಾಮಚಂದ್ರ ಅಧಿಕಾರ ಸಂಪತ್ತು ಹೆಚ್ಚಿದಂತೆ ನಿನ್ನ ಮನ ಸಂಕುಚಿತವಾಗುತ್ತಿದೆಯೇ?........ ನೀನು ಕೌಸಲ್ಯಾ ಪುತ್ರನೇ ಏನು ನನ್ನ ಪುತ್ರನಲ್ಲವೇನು?

ಶ್ರೀ ರಾಮ: (ಬೆಚ್ಚಿ)........ ತಾಯಿ, ತಪ್ಪು ತಿಳಿಯದಿರಿ. ಅಭ್ಯಾಸ ಬಲದಿಂದ ಹೇಳಿದ ಮಾತಷ್ಟೆ.

ಕೈಕೇಯಿ: ಅದಿರಲಿ........ ಮದುವೆಯಾದಂದಿನಿಂದ ನೆರಳಿನಂತೆ ನಿನ್ನನ್ನು ಅನುಸರಿಸುತ್ತಿದ್ದ ಜಾನಕಿಯೆಲ್ಲಿ? ಅವಳಿಲ್ಲದೆ ಬಂದಿರುವ ನೀನು ಮೂಗುತಿ ತೆಗೆದ ಮುತ್ತೈದೆಯಂತೆ ಕಾಣುತ್ತಿರುವೆ. ಹೋಗು ಮುಂದೆ ಅವಳನ್ನು ಏನೇ ಕೆಲಸವಿದ್ದರೂ ಬಿಡಿಸಿ ಕರೆದು ತಾ.

ಶ್ರೀ ರಾಮ: (ತಲೆತಗ್ಗಿಸಿ ನಿಟ್ಟುಸಿರಿಟ್ಟು—ಸ್ವಗತ) ಹಾ ದೈವವೇ; ಎಂತಹ ಕಠಿಣ ಪರೀಕ್ಷೆ;

ಕೈಕೇಯಿ: ಏನು ನಿನ್ನ ವರ್ತನೆ? ನಾನು ಹೇಳಿದ್ದು ಕೇಳಿಸಲಿಲ್ಲವೋ? ಅಥವಾ ನನ್ನ ಬಗ್ಗೆ ಇನ್ನೂ ತಿರಸ್ಕಾರವೋ?

ಶ್ರೀರಾಮ: ತಾಯೀ........

ಕೈಕೇಯಿ: ಮತ್ತೆ ಸೀತೆಯನ್ನು ಕರೆದು ತಾ ಎಂದರೆ ಮುಖವನ್ನು ಕೆಳಗೆ ಹಾಕಿದೆಯೇಕೆ?....(ನಗುತ್ತಾ)

ತಿಳಿಯಿತು. ಪ್ರೇಮ ಕಲಹವೇನು?........ಆದರೆ ಸೀತಾರಾಮರ ದಾಂಪತ್ಯದಲ್ಲಿ 'ಕಲಹ' ಎಂಬ ಪದಕ್ಕೆ ಯಾವುದೇ ರೀತಿಯಲ್ಲಾದರೂ ಸ್ಥಾನವಿದೆಯೇ? ಹೋಗು ರಾಮ. ಕಾರಣ ಏನೇ ಇರಲಿ ಅವಳನ್ನು ಕರೆದು ತಾ. ಅವಳಿಲ್ಲದೆ ನಾನು ನಿನ್ನನ್ನು ಆಶೀರ್ವದಿಸಲಾರದೆ... ....

ಶ್ರೀರಾಮ: (ಆರ್ತನಾಗಿ) ಅಮ್ಮಾ......

ಕೈಕೇಯಿ: (ಅವನ ಧ್ವನಿಯಲ್ಲಿನ ನೋವು ಗುರುತಿಸಿ) ಏನಾಯಿತು ಕಂದ? ಏಕೆ ಹೀಗಿದ್ದೀಯೇ? ಸರಸದಲ್ಲಿ ಅಂದ ಕಟುನುಡಿ ಅದು. ಮರೆತು ಬಿಡು......(ಕುಳಿತಲ್ಲಿಂದ ಎದ್ದು ಅವನನ್ನಪ್ಪಿಕೊಂಡು) ನನ್ನ ಆಶೀರ್ವಾದ ನೀನು ಹುಟ್ಟಿದ ಕ್ಷಣದಿಂದಲೂ ನಿನ್ನ ತಲೆಯ ಮೇಲಿದೆಯಪ್ಪಾ. ನೀನು ರಾಕ್ಷಸರನ್ನು ಕೊಂದಿದ್ದೂ ನನ್ನ ಮೂಲಕವೇ ನೆನಪಿರಲಿ. (ರಾಮನ ಮುಖವನ್ನು ನೋಡಿ) ಏನಾಗಿದೆ ರಾಮಚಂದ್ರ ಇಂದು ನಿನಗೆ? ಯಾಕೆ ಈ ಮೌನ ಹೇಳಲ್ಲ? (ಭರತನ ಕಡೆ ತಿರುಗಿ) ನೀನಾದರೂ ಹೇಳಲ್ಲ ವಿಷಯವೇನೆಂದು;

(ಎಲ್ಲರೂ ಮೌನ)

ಕೈಕೇಯಿ: ಏನೀ ಮೌನ ನನಗೆ ಅರ್ಥವಾಗುತ್ತಿಲ್ಲ. ಭರತ ನನ್ನಾಜ್ಞೆ ಏನು ನಡೆಯಿತೆಂದು ಹೇಳಲೇಬೇಕು ನೀನು.

ಭರತ:(ತೊದಲುತ್ತಾ) ಹೇ-ಳು-ವೇ ತಾಯಿ..... .. ಹೇಳುವೆ ಇಂದು ನಮ್ಮೆಲ್ಲರ ಪಾಲಿನ ಅಶುಭ ದಿನ; ನಮ್ಮ ವಂಶದ ಲಕ್ಷ್ಮಿಯನ್ನು ಹೊರಗಟ್ಟಿದ ಭೀಕರ ದಿನ.

ಕೈಕೇಯಿ: (ತವಕದಿಂದ) ಸರಿಯಾಗಿ ಹೇಳು.

ಭರತ: ತಾಯಿ, ಬೇಹುಗಾರನೊಬ್ಬ ನಿನ್ನೆ ಸಿಡಿಲಿನಂತ ಸುದ್ದಿಯೊಂದ ತಂದ. (ತಡೆದು) ಅದ ಹೇಳಲು ನನಗೆ ಬಾಯಿ ಬಾರದು. ತಾವು ಕೇಳುತ್ತಿರುವುದರಿಂದ ಹೇಳಬೇಕಾಗಿದೆ. ಯಾವನೋ ಅನಾಮಿಕ ಅಗಸನೊಬ್ಬನು............

ಶ್ರೀ ರಾಮ: (ಮಧ್ಯದಲ್ಲಿಯೇ ಅವನನ್ನು ತಡೆಯುತ್ತಾ) ಭರತ, ಅವನ ವಿಷಯದಲ್ಲಿ ತಿರಸ್ಕಾರ ಸಲ್ಲದು. ಎಚ್ಚರಿಕೆ, ಆತನು ನನ್ನ ಪ್ರಜೆ ಎಂಬುದ ಮರೆಯದಿರು. ಅಂದ ಮೇಲೆ ಅವನು ಅನಾಮಿಕ ಹೇಗಾದಾನು?

ಭರತ: (ತಲೆತಗ್ಗಿಸಿ) ಉದ್ಧಟತನಕ್ಕೆ ಕ್ಷಮೆಯಿರಲಿ, ..............ಅವನ ವಿಷಯದಲ್ಲಿ ಗೌರವ ಕೊಡಲು ಮನಸ್ಸು ಬರುವುದಾದರೂ ಹೇಗೆ?

ಕೈಕೇಯಿ: ಭರತ- ಹೇಳುವುದನ್ನು ಬೇಗ ಹೇಳಿ ಮುಗಿಸು. ವ್ಯರ್ಥಾಲಾಪದಲ್ಲಿ ಕಾಲಹರಣ ಬೇಡ....

ಭರತ: ಶ್ರೀ ರಾಮಚಂದ್ರನ ಪ್ರಜೆಗಳಲ್ಲಿ ಒಬ್ಬನಾದ ಒಬ್ಬ ಅಗಸನು ಅಷ್ಟು ದಿನ ರಾವಣನ ಅರಮನೆಯಲ್ಲಿದ್ದ ಸೀತಾದೇವಿಯನ್ನು ಸ್ವೀಕರಿಸಿದ್ದು ಸರಿಯಾಗಲಿಲ್ಲ ಎಂದು ಏನೇನೋ ಅಂದನಂತೆ..........

ಕೈಕೇಯಿ: ಮೂರ್ಖನ ಮಾತಿಗೆ ಅಷ್ಟು ಬೆಲೆಯೇ? ಅಷ್ಟು ಬೇಸರವೇ?

ಭರತ: ತಾಯಿ, ಬೇಸರ ಅಷ್ಟಕ್ಕೆ ನಿಂತಿದ್ದರೆ ಅರಮನೆ ಇಂದು ಕತ್ತಲೆಯ ಮಡಿಲಾಗುತ್ತಿರಲಿಲ್ಲ. ಕೌಸಲ್ಯಾಮಾತೆ ಶೋಕತಪ್ತಳಾಗಿ ರೋಧಿಸುತ್ತಿರಲಿಲ್ಲ. ನಮ್ಮೆಲ್ಲರ ಹೃದಯ ಒಡೆಯುತ್ತಿರಲಿಲ್ಲ.........

ಕೈಕೇಯಿ: ಭರತ, ಆದದ್ದಾದರೂ ಏನು? ಸ್ವಲ್ಪ ವಿವರವಾಗಿ ಹೇಳಬಾರದೆ?

ಭರತ: ಹೇಳಲಿಲ್ಲವೇನು ಉಳಿದಿಲ್ಲ ತಾಯಿ; ನಿಷ್ಪಕ್ಷಪಾತಿಯೂ ನ್ಯಾಯವಾದಿಯೂ ಆದ ರಾಮನು ತನ್ನ ಪ್ರಜೆಯು ಎಷ್ಟೇ ಅಲ್ಪನಾಗಿದ್ದರೂ ಅವನ ಮಾತಿಗೆ ಮನ್ನಣೆಕೊಟ್ಟು......ಕೊಟ್ಟು ಸೀತಾ ದೇವಿಯನ್ನು.........ತ್ಯಜಿಸಿಬಿಟ್ಟ.........

ಕೈಕೇಯಿ, ಸುರಮೆ: (ಒಟ್ಟಿಗೆ) ಹಾಂ!

ಕೈಕೇಯಿ: ನಾನು ಕೇಳುತ್ತಿರುವುದಾದರೂ ಏನು?

ಶ್ರೀ ರಾಮ: ಲಕ್ಷ್ಮಣನೊಡನೆ ಆಕೆಯನ್ನು ಅಡವಿಗೆ ಕಳುಹಿಸಿದ ನಂತರ ಕೌಸಲ್ಯಾ ಮಾತೆಯನ್ನು ನೋಡಲು ಹೋಗಿದ್ದೆ.........ಆದರಿಂದಲೇ ಇಂದು ತಮ್ಮ ಆಶೀರ್ವಾದ ಬೇಡುವುದು ತಡವಾಯಿತು.........ಕ್ಷಮೆಯಿರಲಿ.

ಕೈಕೇಯಿ: (ಕೋಪದಿಂದ) ನಿಲ್ಲಿಸು ಈ ಬೂಟಾಟಿಕೆಯ ವಿನಯ ತುಂಬು ಗರ್ಭಿಣಿಯನ್ನು ಕಾಡಿಗಟ್ಟಿದೆ ಎಂದು ಎದೆಯುಬ್ಬಿಸಿ ಹೇಳುತ್ತಿರುವ ನೀನೊಬ್ಬ ಗಂಡಸೇನು?

ಶ್ರೀ ರಾಮ: (ಸ್ವಗತ)......ಅಂದು ವೈದೇಹಿಯೂ, ಅವಳನ್ನು ಕಾಡಿಗೆ ಕರೆದುಕೊಂಡು ಹೋಗುವುದಿಲ್ಲವೆಂದಾಗ ಇದೇ ಮಾತು ಹೇಳಿದ್ದಳು.

ಕೈಕೇಯಿ: ಬಹುಶಃ ಕೀರ್ತಿಯ ಆಕಾಂಕ್ಷೆ ಈ ಸೂರ್ಯವಂಶದಲ್ಲಿ ವಂಶ ಪಾರಂಪರ್ಯವಾಗಿ ಬಂದಿತ್ತೇನೋ......ಹಾಗಿಲ್ಲದಿದ್ದರೆ ಇಂತಹ ಅಭ್ಯಾಸಗಳು ನಡೆಯುತ್ತಿದ್ದುವಾದರೂ ಏಕೆ? ಕೊಟ್ಟ ಮಾತಿಗೆ ತಪ್ಪಲಾರೆನೆಂದು ಆ ಹರಿಶ್ಚಂದ್ರ ಹೆಂಡತಿ ಮಕ್ಕಳನ್ನು ನರಕ ಶಿಕ್ಷೆಗೆ ಗುರಿಮಾಡಿ ತಾನೂ ಸಹ ಚಿತ್ರಹಿಂಸೆ ಅನುಭವಿಸಿದ. ಲಭಿಸಿತು, ಅವನಿಗೆ ಅಖಂಡ ಕೀರ್ತಿ...... ಇನ್ನು ನನ್ನ ಪತಿ; ನಿಮ್ಮ ತಂದೆ, ಕುಟುಂಬಕ್ಕೆ ಧಕ್ಕೆಯಾದರೆ ವ್ಯಕ್ತಿಯನ್ನು ತ್ಯಜಿಸಬೇಕು...... ಗ್ರಾಮಕ್ಕೆ ಧಕ್ಕೆಯಾದರೆ ಕುಟುಂಬವನ್ನು ತ್ಯಜಿಸಬೇಕು...... ದೇಶಕ್ಕೆ ಧಕ್ಕೆಯಾದರೆ ಗ್ರಾಮವನ್ನು ತ್ಯಜಿಸಬೇಕು ಎಂದು ಶಾಸ್ತ್ರಗಳು ನುಡಿಯುತ್ತವೆ. ಆದ್ದರಿಂದ ನಿಮ್ಮ ತಂದೆ ಅಲ್ಪಮತಿಯೂ, ಸ್ವಾರ್ಥಪರಾಯಣೆಯೂ ಆದ ನನ್ನ ಬೇಡಿಕೆಯನ್ನು ತಳ್ಳಿ ಹಾಕಿ, ಜನರನ್ನು ನೋಯಿಸದೆ ತಾವೂ ಸಂತೋಷದಿಂದಿದ್ದು ಇತರರನ್ನೂ ದುಃಖಕ್ಕೆ ಗುರಿಪಡಿಸದೆ ಇರಬಹುದಾಗಿತ್ತು. ಆದರೆ ನಿಮ್ಮ ತಂದೆಗೆ ಮಾತು ಉಳಿಸಿಕೊಂಡ ಮತಿವಂತನೆಂದು ಕೀರ್ತಿ ಪಡೆಯುವ ಹುಚ್ಚು ಹತ್ತಿತ್ತೆಂದು ಕಾಣಿಸುತ್ತದೆ. ಕೊಟ್ಟ ಮಾತಿಗೆ ಬೆಲೆ ಕೊಟ್ಟರೆ ಆಗುವ ಪರಿಣಾಮವನ್ನು ಲೆಕ್ಕಿಸದೆ ಮೂರ್ಖತನದಿಂದ ವರ್ತಿಸಿ ನನ್ನನ್ನು ಕಳಂಕಿನಿಯನ್ನಾಗಿ ಮಾಡಿ ತಾವು ಅಜರಾಮರರಾದರೂ ಈಗ ನೀನು ಅದನ್ನು ಪುನರಾವರ್ತನೆ ಮಾಡ ಹೊರಟ್ಟಿದ್ದೀಯಾ? ಶ್ರೀ ರಾಮ, ನ್ಯಾಯನಿಷ್ಟ ಧರ್ಮಪರಾಯಣ ಎಂದು ಹೊಗಳಿಸಿಕೊಳ್ಳಲೋಸುಗ ಅಭಾಗಿನಿ ಮೈಥಿಲಿಯ ಹೃದಯಕ್ಕೆ ಬೆಂಕಿಯಿಟ್ಟು ಅಯೋಧ್ಯೆಯ ಸಾತ್ವಿಕ ಜನರ ಒಡಲುಗಳನ್ನು ಉರಿಸಿ ನೋಡುತ್ತಿರುವೆಯಾ? ಇದು ನಿನಗೆ ಸಲ್ಲದು ರಾಮಚಂದ್ರ.

ಶ್ರೀ ರಾಮ: ತಾಯೇ; ಕ್ಷಮಿಸಬೇಕು ಉದ್ವೇಗಭರದಲ್ಲಿ ನೀವು ಮಾತನಾಡುತ್ತಿರುವಿರಿ..... ಶಾಂತವಾಗಿ ಆಲೋಚಿಸಿದರೆ ವಿಷಯ ತಮ್ಮ ಅರಿವಿಗೆ ಬರುವುದು ...... ದುಡುಕಿ ಆತುರದಲ್ಲಿ ದೃಷ್ಟಿ ಮಾಂದರಾಗಿ ನುಡಿಯದಿರಿ, .... ತಂದೆಯಾಗಲೀ, ನಾನಾಗಲೀ ಅಥವಾ ಮತ್ತಾರೇ ಆಗಲೀ ನಮ್ಮ ವಂಶದಲ್ಲಿ ಕೀರ್ತಿಗೋಸ್ಕರ ಸ್ವಾರ್ಥವನ್ನು ಬಲಿಕೊಟ್ಟಿಲ್ಲ–ಕೊಡುವುದಿಲ್ಲ-ಸ್ವಾರ್ಥದ ಬಲಿಯಾಗಿರುವುದು ಕರ್ತವ್ಯದ ವೇದಿಕೆಯ ಮೇಲೆ; ಕೀರ್ತಿಯ ಗರುಡಗಂಬದ ಮೇಲಲ್ಲ. ರಾಜನು ಪ್ರಜೆಗಳ ಮಾರ್ಗದರ್ಶಕ, ಅವನು ನುಡಿದಂತೆ ನಡೆದಂತೆ ನಡೆಯುವವರು ಅವನ ಧರ್ಮಭೀರು ಪ್ರಜೆಗಳು. ಅವರನ್ನು ಸನ್ಮಾರ್ಗದಲ್ಲಿ ಕೊಂಡೊಯ್ಯುವ ಹೊಣೆ ಆತನದು. ಅವರು ಅಮಾಯಕರಾದರೆ ರಾಜನ ಹೊಣೆ ಇನ್ನೂ ಗುರುತರವಾದ್ದು ಏನೇ ಕಷ್ಟವಿರಲಿ, ಬರಲಿ ಎದೆ ಗುಂದದೆ ಸತ್ಯವನ್ನು ಬಿಡದೆ ನೀತಿ ಮಾರ್ಗದಲ್ಲಿ ನಡೆಯಬೇಕು ಎಂದು ತನ್ನ ಸ್ವಂತ ಕ್ರಿಯೆಗಳ ದೃಷ್ಟಾಂತದಿಂದ ತೋರಿಸುವುದೇ ರಾಜನ ನಿಜವಾದ ಕರ್ತವ್ಯ; ಈ ಕರ್ತವ್ಯವನ್ನು ಪಾಲಿಸುವಾಗ ಜೀವನದಲ್ಲಿ

ಎಡರು ತೊಡರುಗಳು, ದುಃಖ ಕ್ಷೋಭೆಗಳು, ಸತತ ಹೋರಾಟಗಳು ಅನಿವಾರ್ಯ. ಅಂತಹ ಸಮಯದಲ್ಲಿ ಅನೇಕ ವೇಳೆ ರಾಜನು ತನ್ನ ಸ್ವಾರ್ಥವನ್ನು ತುಳಿದು ಹೊಸಕಿ ಅದರ ಮೇಲೆ ಧರ್ಮ ಧ್ವಜವನ್ನು ನೆಡ ಬೇಕಾಗುವುದು. ಸಾಮಾನ್ಯ ಪ್ರಜೆಯೊಬ್ಬರು ತನ್ನ ಜೀವನದಲ್ಲಿ ಧರ್ಮವನ್ನು ಅಳವಡಿಸಿಕೊಂಡಿರುವಾಗ ಅದು ಅವನ ಕುಟುಂಬ ಬಂಧು ಬಳಗ ಮಿತ್ರ ವೃಂದಕ್ಕೆ ಹೆಚ್ಚು ಸೀಮಿತವಾಗಬಹುದು. ಆದರೆ ರಾಜನ ವಿಷಯವೇ ಬೇರೆ. ಅವನ ಜೀವನ ಇಷ್ಟು ಸಂಕುಚಿತ ಎಲ್ಲೆಯಲ್ಲಿ ಪರಿಮಿತವಾಗಿರುವುದಿಲ್ಲ. ಅವನ ಜೀವನ ಒಂದು ಬ್ರಹ್ಮಾಂಡ ವೃತ್ತ ಅವನ ಕಾರ್ಯಕಲಾಪಗಳು ವೃತ್ತದ ಪೂರ್ತಿ ಪ್ರಭಾವ ಬೀರುತ್ತವೆ. ನನ್ನ ಪ್ರತಿಯೊಬ್ಬ ಪ್ರಜೆಯ ಅಭಿಪ್ರಾಯ ಸುಖ ದುಃಖಗಳನ್ನು ಕುರಿತು ಯೋಚಿಸುವುದು ನನ್ನ ಆದ್ಯ ಕರ್ತವ್ಯ.

ಕೈಕೇಯಿ: (ತಿರಸ್ಕಾರದ ನಗೆ ನಕ್ಕು) ನಿನ್ನ ಮಾತಿನ ಪ್ರಕಾರವೇ ಸೀತೆಯೂ ನಿನ್ನೊಬ್ಬ ಪ್ರಜೆಯಲ್ಲವೇ? ಒಬ್ಬ ಪ್ರಜೆಯನ್ನು ಮೆಚ್ಚಿಸಲೋಸುಗ ಅವಳ ಸುಖ ಶಾಂತಿಯನ್ನು ಸೂರೆಗೈಯುವ ಹಕ್ಕು ನಿನಗೆ ಹೇಗಿತ್ತು?

ಶ್ರೀ ರಾಮ: ತಾಯೇ ಸೀತೆಯ ಅಸ್ತಿತ್ವ ನನ್ನಿಂದ ಬೇರೆಯಾಗಿದ್ದರೆ ತಾವು ಹೇಳಿದ ಮಾತು ಸರಿಯಾಗುತ್ತಿತ್ತು. ಆಗ ಅವಳನ್ನು ಪ್ರತ್ಯೇಕ ಪ್ರಜೆಯೆಂದು ಭಾವಿಸಬಹುದಾಗಿತ್ತು. ಆದರೆ ಅವಳಿಗೆ ತಾನು ನನ್ನ ಪ್ರಜೆಯಾಗಿರುವುದಕ್ಕಿಂತ ನನ್ನ ಅರ್ಧಾಂಗಿಯಾಗಿರುವುದರಲ್ಲಿ ಹೆಚ್ಚು ತೃಪ್ತಿಯಿತ್ತು, ಸಂತೋಷವಿತ್ತು. ತನ್ನನ್ನು ನನಗೆ ಶಿವಧನುರ್ಭಂಗವಾದ ದಿನದಿಂದಲೇ ಅರ್ಪಿಸಿಕೊಂಡಳು. ಸ್ವ ಸಮ್ಮತಿಯಿಂದ ನನ್ನಲ್ಲಿ ಲೀನವಾದಳು. ನಾನಾದರೂ ಸೀತೆಯನ್ನು ನನ್ನ ಅಸ್ತಿತ್ವದಿಂದ ದೂರವಿಟ್ಟು ನೋಡಲಾರೆ. ಸೀತೆಗಾದ ದುಃಖ ನನ್ನದು ಅವಳಿಗಾದ ಶಿಕ್ಷೆ ನನ್ನದು ನನ್ನ ಪ್ರಜೆಗಳಿಗಾಗಿ ನನ್ನ ಅರ್ಧಾಂಗವನ್ನು ನಾನೇ ಶಿಕ್ಷಿಸಿಕೊಳ್ಳಬೇಕಾಯಿತು. ಒಂದು ವೇಳೆ ಸೀತೆ ತನ್ನ ಪ್ರತ್ಯೇಕ ಅಸ್ತಿತ್ವ ಸ್ಥಾಪಿಸಿಕೊಂಡು ತನ್ನ ಸ್ವಾತಂತ್ರ್ಯ ಕಾಪಾಡಿಕೊಳ್ಳಲು ಇಚ್ಛಿಸಿದ್ದರೆ ನಾನವಳನ್ನು ಖಂಡಿತ ಕಾಡಿಗೆ ಕಳುಹಿಸುತ್ತಿರಲಿಲ್ಲ. ಏಕೆಂದರೆ ಆಗ ಅವಳು ನನ್ನ ಅರ್ಧಾಂಗಿಯಾಗುತ್ತಿರಲಿಲ್ಲ. ನನ್ನ ಪ್ರಜೆಗಳಲ್ಲೊಬ್ಬಳಾಗಿರುತ್ತಿದ್ದಳು......... ನನ್ನ ಪ್ರಜೆಗಳು ಖಂಡಿತ ನನ್ನನ್ನು ಅರ್ಥಮಾಡಿಕೊಳ್ಳುತ್ತಾರೆ. ಸೀತೆಗೆ ಅನ್ಯಾಯವಾಗಿದೆಯೆಂದು ಅಂದುಕೊಂಡರೂ ನನ್ನ ಮೇಲಿನ ಭಿಮಾನದಿಂದ ಅವರೂ ಧರ್ಮಕ್ಕೆ ಬಾಗುತ್ತಾರೆ. ಅಧಿಕ ಪ್ರಸಂಗವನ್ನು ಮನ್ನಿಸಿ ದೇವಿ...... ವಾಸ ಕ್ಕೋಸ್ಕರ ನಾನು ಇಷ್ಟೊಂದು ಮಾತುಗಳನ್ನಾಡಲಿಲ್ಲ. ಕರ್ತವ್ಯ ಪಥದಲ್ಲಿ ಬಿದ್ದು ಬಲು ಕಷ್ಟದಿಂದ ಸ್ವಾರ್ಥವನ್ನು ಬಲಿ ಕೊಟ್ಟಿರುವ ಕೇವಲ ಒಬ್ಬ ಮನುಷ್ಯ ನಾನು...... ನಿಮ್ಮೊಡನೆ ಇಷ್ಟು ಹೊತ್ತು ಆಡಿದ ಮಾತುಗಳು ಸರಾಗವಾಗಿ ಬಂದುವಲ್ಲ...... ಅಭಾಗಿನಿ ಚಿರ ದುಃಖಿತೆ ಸೀತೆಯನ್ನು ನೆನೆದು ನನ್ನ ಹೃದಯ ಬರಿದು ಹೋಗುತ್ತಿದೆ. ವಿರಹ ವೇದನೆ, ಕರುಣೆ, ಮಮತೆಗಳಿಂದ ನಾನು ಕುಸಿಯುತ್ತಿದ್ದೇನೆ. ನನ್ನ ಸೀತೆ ಕೊನೆಯವರೆವಿಗೂ ಚಿರದುಃಖಿನಿಯಾಗಿ, ಅಭಾಗಿನಿಯಾಗಿಯೇ ಉಳಿದುಹೋದಳು

ಕೈಕೇಯಿ: ಶ್ರೀ ರಾಮ ನೀವೆಲ್ಲಾ ಆಶಿಸಲಿ ಬಿಡಲಿ ಕೀರ್ತಿಯ ನೆರಳು ನಿಮ್ಮೆಲ್ಲರನ್ನೂ ಹಿಂಬಾಲಿಸುತ್ತದೆ. ನಿಮ್ಮ ತಂದೆ ದಶರಥನನ್ನು ಮಾತು ತಪ್ಪದ ಮಹಾರಾಜ ಎಂದು ಜನ ಕೊಂಡಾಡಿದರೆ ನಿನ್ನನ್ನು ಕರ್ತವ್ಯ ಪರಾಯಣನೆನ್ನುತ್ತಾರೆ. ಭರತ, ಲಕ್ಷ್ಮಣ, ಶತ್ರುಘ್ನರೂ ತಮ್ಮ ತಮ್ಮ ಭೃತ್ಯನಿಷ್ಠೆಗಳಿಂದ ಸ್ಥಾನ ಗಳಿಸಿಕೊಂಡರು. ಕೌಸಲ್ಯಾ, ಸುಮಿತ್ರೆಯರು ಪತಿವ್ರತೆಯರಾದರು ಸೀತೆಯ ಮಾತು ಹೇಳುವುದೇ ಬೇಡ. ಆದರೆ ದುರಭಿಮಾನಿಯಾಗಿ ಮುಖದಲ್ಲಿ ಅಳಿಸಲಾರದ ಮಸಿ ಹೊತ್ತು ಹಗಲಿರುಳು ನಾನು ಬಿತ್ತಿದ ವಿಷದ ಬೀಜದಿಂದಾದ ವಿಷ ಫಲದ ರುಚಿಯನ್ನು ಸವಿಯಲುಳಿದಿರುವವಳು ನಾನೊಬ್ಬಳೇ; ರಾಮ. ಸೀತೆಯಲ್ಲ ಚಿರದುಃಖಿ ಈ ಕೈಕೇಯಿ ಚಿರದುಃಖಿನಿ. ಅವಳಲ್ಲ ದೂಷಿತೆ; ನಾನು. ಅಭಾಗಿನಿ ಸೀತೆಯೋ ನಾನೋ ನೀನೇ ಹೇಳು (ಬಿಕ್ಕುವಳು)

ವಿಜಯಾ ಚಂದ್ರಮೌಳೀಶ್ವರ.

# ಕ್ಷಮಯಾ ಧರಿತ್ರಿ

ಶೋಷಣೆ ಹಾಗೂ ವರದಕ್ಷಿಣೆ ಇವೆರಡಕ್ಕೂ ಮತ್ತು ಹೆಣ್ಣಿಗೂ ಬಹಳ ಹತ್ತಿರದ ಸಂಬಂಧ ಕಂಡು ಬರುತ್ತದೆ. ಆಧುನಿಕ ಸಮಾಜದ ಪ್ರಗತಿಯಲ್ಲಿ ಸ್ತ್ರೀಯ ಸ್ಥಾನ–ಮಾನವನ್ನು ಅವಲೋಕಿಸಿದಾಗ, ಆಕೆ ಎಷ್ಟೇ ಮುಂದುವರೆದರೂ ಕೂಡ, ಅವರವರ ವರ್ಗಗಳಲ್ಲಿ, ಈ ವರದಕ್ಷಿಣೆ ಮತ್ತು ಶೋಷಣೆ ಕಂಡು ಬರುತ್ತದೆ. ಇದು ಕೆಳವರ್ಗದವರಿಂದ, ಮೇಲುವರ್ಗದವರಿಗೂ ಸಹ ಅನುಗುಣವಾಗಿ ಅಂತಸ್ತಿಗೆ ತಕ್ಕಂತೆ ನಡೆಯುತ್ತಿದೆ.

ಗ್ರಾಮೀಣ ಪ್ರದೇಶದಲ್ಲೂ ಕೂಡ ಇದು ಅನ್ವಯವಾಗುವುದರ ಜೊತೆಯಲ್ಲಿ ಹೆಣ್ಣು ಹೆಣ್ಣನ್ನ, ಗಂಡು ಹೆಣ್ಣನ್ನು, ಯಾವ ರೀತಿಯಲ್ಲಿ ಶೋಷಿಸುತ್ತಾರೆ ಹಾಗೂ ಪೋಷಿಸುತ್ತಾರೆ ಎನ್ನುವುದನ್ನು ಕಂಡು ಕೊಳ್ಳಬಹುದು. ಇಷ್ಟಾದರೂ, ಹೆಣ್ಣು, ಕ್ಷಮಾಯಾಧರಿತ್ರಿಯ ಹೆಸರನ್ನು ಸಾರ್ಥಕ ಪಡಿಸಲು ಎಷ್ಟೆಲ್ಲಾ ನೋವನ್ನು ಅನುಭವಿಸಿದರೂ ತಾಳ್ಮೆ ವಹಿಸುತ್ತಾಳೆ, ದಿನದೂಡುತ್ತಾಳೆ.

ಇದೊಂದು ಗ್ರಾಮೀಣ ಪ್ರದೇಶದಲ್ಲಿ ನಡೆದ ಘಟನೆ. ಅದೊಂದು ಅತಿ ಹಿಂದುಳಿದ ಬಡ ಕೂಲಿಕಾರ ಕುಟುಂಬದಲ್ಲಿ ಲಕ್ಷ್ಮಿ ಬೆಳೆದು ಬಂದಳು. ಈಗ ಈಕೆಗೆ ೨೫ ವರ್ಷಗಳಾಗಿವೆ. ಋತುಮತಿಯಾದ ಕೆಲವು ತಿಂಗಳಲ್ಲಿ ಸ್ವಲ್ಪ ಉತ್ತಮ ಪರಿಸ್ಥಿತಿಯಲ್ಲಿದ್ದ ಕುಟುಂಬಕ್ಕೆ ಸೊಸೆಯಾಗಿ ಆ ಮನೆಗೆ ಕಾಲಿಟ್ಟಳು. ಗಂಡನ ಮನೆಗೆ ಕಾಲಿಡುವಾಗ, ತವರು ಮನೆಯಿಂದ ಸ್ವಲ್ಪ ಒಡವೆ, ಹಣವನ್ನು ತೆಗೆದುಕೊಂಡು ಹೋಗಿದ್ದಳು. ಮೊದ ಮೊದಲು ತೋರಿಸುತ್ತಿದ್ದ ಪ್ರೀತಿ, ಆತ್ಮೀಯತೆ ದಿನ ಕಳೆಯುತ್ತಾ ಬಂದ ಹಾಗೆ ಮರೆಯಾಗುತ್ತಾ ಬಂತು. ಗಲಾಟೆ ಪ್ರಾರಂಭವಾಯಿತು. ಈಕೆ ಏನು ಕೆಲಸ ಮಾಡಿದರೂ ಸಾಲದೆಂದೂ, ಕೂಲಿ ಮಾಡಿ ತಿನ್ನುತ್ತಿದ್ದವಳೆಂದೂ, ಇಲ್ಲಿಯ ಸೌಲಭ್ಯ ಅವಳಿಗೆಂದೂ ಸಿಕ್ಕಿರಲಿಲ್ಲವೆಂದೂ ಹಂಗಿಸುವುದು, ತವರು ಮನೆಗೆ ಹೋಗಿ ಹಣ ತಾ ಎಂದೂ ಅತ್ತೆಯ ಕಿರುಕುಳ ಹೆಚ್ಚಾದಂತೆ ಗಂಡ ಅನ್ನಿಸಿಕೊಂಡವ ತನ್ನ ತಾಯಿ ಹೇಳಿದಂತೆ ಕೇಳುವವ, ಆಕೆ ಹಾಕಿದ ಗೆರೆಯನ್ನು ದಾಟುತ್ತಿರಲಿಲ್ಲ. ಅವನಿಗೆ ಹೆಂಡತಿಯಲ್ಲಿ ಮೇಲೆ ಮೋಹ ರಾತ್ರಿಯ ಹೊತ್ತಿನಲ್ಲಿ ಮಾತ್ರ.

ಮದುವೆಯಾದ ವರ್ಷದಲ್ಲಿ ಲಕ್ಷ್ಮಿ ಗರ್ಭಿಣಿಯಾದಳು, ಆದರೆ ಆ ಸಂದರ್ಭದಲ್ಲಿ ಆಸ್ಪತ್ರೆಯ ಚಿಕಿತ್ಸೆಯಾಗಲಿ, ಒಳ್ಳೆಯ ಊಟವಾಗಲಿ ಸಿಗುತ್ತಿರಲಿಲ್ಲ. ಇವಳೇ ಮಾಡಿದ ಅಡಿಗೆಯಲ್ಲಿ ಅತ್ತೆ–ಮಾವ ನಾದಿನಿ ಮೈದುನ, ಗಂಡ ಊಟ ಮಾಡಿ ಉಳಿದರೆ ಅದೇ ಅಮೃತದ ಭೋಜನ, ಎಷ್ಟೋ ದಿನಗಳು ಬರೀ ರಾಗಿ ಮುದ್ದೆಯನ್ನೆ ಕಣ್ಮುಚ್ಚಿ ತಿನ್ನ ಬೇಕಾದ ಪರಿಸ್ಥಿತಿ. ಹಾಗೆ ತಿಂದು ದಿನ ನೂಕಿದ ಪ್ರಸಂಗಗಳಿಗೆ ಲೆಖ್ಖವೇ ಇಲ್ಲ.

ಲಕ್ಷ್ಮಿಗೆ ಏಳು ತಿಂಗಳಾದಾಗ, ಅತ್ತೆ–ಸೊಸೆಗೂ ಜಗಳವಾದಾಗ ಪತಿ ಎನಿಸಿಕೊಂಡವನು ಆಕೆ ತನ್ನ ಹೆಂಡತಿ, ಅದೂ ಗರ್ಭಿಣಿ ಎನ್ನುವುದನ್ನು ಕೂಡ ಲಕ್ಷಿಸದೇ ಒದೆಯುವುದರ ಮೂಲಕ ತನ್ನ ಹಕ್ಕನ್ನು ಚಲಾಯಿಸಿದ. ಮಾನಸಿಕವಾಗಿ ಬೆಲೆ ಕೊಡದೇ, ದೈಹಿಕ ಪರಿಸ್ಥಿತಿಯನ್ನು ಅರಿತು ಕೂಡ ಆತ ಚಲಾಯಿಸಿದ ಹಕ್ಕಿಗೆ, ಪ್ರತಿಯಾಗಿ ಲಕ್ಷ್ಮಿಗೆ, ಮೂರು–ನಾಲ್ಕು ದಿನಗಳು ಏಳಲು ಕೂಡ ತ್ರಾಣ ಇರಲಿಲ್ಲ, ನಾಲ್ಕನೆ ದಿನ ಗರ್ಭಪಾತವಾಯಿತು, ಈ ಸಂದರ್ಭದಲ್ಲಿ ಮನೆಯಲ್ಲಿ ಯಾರು ಇರಲಿಲ್ಲ. ಇವಳ ನರಳಾಟ, ಕೂಗು ಕೇಳಿ ಪಕ್ಕದ ಮನೆಯಲ್ಲಿಯ ೧೮ ವರ್ಷದ ಯುವತಿಯೊಬ್ಬಳು ಬಂದು ಸಹಾಯಕ್ಕೆ ಅನುವಾದಳು. ಆದರೆ ಈ ಘಟನೆ, ಲಕ್ಷ್ಮಿಯ ಗಂಡನಿಗಾಗಲಿ, ಅತ್ತೆಗಾಗಲಿ, ಮನೆಯ ಸದಸ್ಯರಿಗಾಗಲಿ ಯಾವ ರೀತಿಯಲ್ಲೂ ಪರಿಣಾಮವನ್ನುಂಟು ಮಾಡಲಿಲ್ಲ, ಆದರೆ ಲಕ್ಷ್ಮಿ ಈ ಸಂದರ್ಭದಲ್ಲಿ ತವರು ಮನೆಗೆ ಹೋಗಿ ಬರುತ್ತೇನೆ ಎಂದಾಗ, " ಹೋಗು, ಆದರೆ, ನಿನ್ನೆಲ್ಲ

ವಸ್ತುವನ್ನು ತೆಗೆದುಕೊಂಡು ಹೋಗಿ ಅಲ್ಲಿಯೇ ಇರು, ಇಲ್ಲಿಗೆ ವಾಪಸ್ ಬರಬೇಡಾ" ಎಂದರು ಅತ್ತೆ-ಗಂಡ. ಯಾರಿಂದಲೋ ವಿಷಯ ತಿಳಿದು ಬಂದ ಲಕ್ಷ್ಮಿಯ ತಂದೆಗೆ, ಕಥೆ ಕಟ್ಟಿ ಹೇಳಿ, ನಿಮ್ಮ ಮಗಳಿಗೆ ತಿಳುವಳಿಕೆ ಹೇಳಿ, ಇಲ್ಲವಾದರೆ ಕರೆದುಕೊಂಡು ಹೋಗಿ, ಎಂದಾಗ ಆತ ಏನು ಹೇಳಲಾರದೇ "ಕೊಟ್ಟ ಹೆಣ್ಣು ಕುಲಕ್ಕೆ ಹೊರಗು" ಎಂದು ಆಕೆಗೆ ಬುದ್ಧಿ ಹೇಳಿ ಹೊರಟು ಹೋದರು.

ಅತ್ತೆಯ ಮನೆಯಲ್ಲಿ ದುಡಿಯುವ ಯಂತ್ರವಾಗಿದ್ದ ಲಕ್ಷ್ಮಿ ಮತ್ತೆ ಗರ್ಭಿಣಿಯಾದಳು. ಮನೆಯಲ್ಲಿ ಆಗಾಗ ಕಲಹಗಳು, ಜೊತೆಯಲ್ಲಿ ಹೊಡೆಯುವುದು ನಡೆದೇ ಇತ್ತು. ಇದೆಲ್ಲವನ್ನು ಸಹಿಸಿಕೊಂಡು ದಿನ ನೂಕುತ್ತಿದ್ದ ವೇಳೆಗೆ ಆ ಮನೆಯಲ್ಲಿ ಯಾವ ಸ್ಥಾನ-ಮಾನಗಳು ಇರಲಿಲ್ಲ. ಎಂಟು ತಿಂಗಳು ತುಂಬುತ್ತಿದ್ದಂತೆ ನೋವು ಪ್ರಾರಂಭವಾದಾಗ, ಯಥಾಪ್ರಕಾರ ಸುಮ್ಮನಾದರು. ಅಕ್ಕಪಕ್ಕದವರು ಬುದ್ಧಿ ಹೇಳಿದಾಗ ಆಸ್ಪತ್ರೆಗೆ ಸೇರಿಸಿದರು. ಆದರೆ ಮಗು ಮಾತ್ರ ಉಳಿಯಲೇ ಇಲ್ಲ.

ಈ ಸಮಯದಲ್ಲಿ ಅತ್ತೆ, ಮಗನಿಗೆ ಈಕೆ ಬಂಜೆ, ಇವಳಿಗೆ, ಮಕ್ಕಳು ಉಳಿಯುವುದಿಲ್ಲ, ನಿನಗೆ ಬೇರೆ ಮದುವೆ ಮಾಡುತ್ತೇನೆಂದು ಕರೆದುಕೊಂಡು ಹೋದಳು. ಸರ್ಕಾರಿ ಆಸ್ಪತ್ರೆಯಲ್ಲಿದ್ದವಳನ್ನು, ಅಲ್ಲಿಯ ಮಾನವೀಯತೆಯ ನರ್ಸ್ ಒಬ್ಬರು, ಇವಳ ಕಥೆಯನ್ನೆಲ್ಲ ಕೇಳಿ, ಅವಳ ತವರು ಮನೆಯವರಿಗೆ ವಿಷಯ ತಿಳಿಸಿದರು. ಲಕ್ಷ್ಮಿಯ ತಾಯಿ-ತಂದೆಯರು ಬಂದು, ಅವರ ಮನೆಗೆ ಕರೆದೊಯ್ದರು. ಎರಡು ತಿಂಗಳು ವಿಶ್ರಾಂತಿ ತೆಗೆದುಕೊಂಡು, ನಂತರ ನನಗೆ ಗಂಡನ ಮನೆಯೇ ಶ್ರೇಷ್ಠವೆಂದು, ಹೊರಟು ಬಂದಳು.

ಈ ಸಮಯದಲ್ಲಿ ಲಕ್ಷ್ಮಿಯು ಗಂಡನಿಗೆ ಎಲ್ಲೂ ಹುಡುಗಿ ಸಿಕ್ಕದೇ ಅಲೆದಾಡುತ್ತಿದ್ದು, ಒಂದು ವರ್ಷದ ತನಕ ಹುಡುಕಾಟ ನಡೆಸಿದರು. ಆದರೂ ಹುಡುಗಿ ಸಿಗಲಿಲ್ಲ. ಈ ಘಟನೆಗಳು ಅಕ್ಕ ಪಕ್ಕದವರಿಗಾಗಲಿ, ಅವಳ ಸುತ್ತ ಮುಲಿನ ಪರಿಸರದವರಿಗಾಗಲಿ ಪರಿಣಾಮ ಬೀರುತಿರಲಿಲ್ಲ. ಹೆಣ್ಣಿನ ಜನ್ಮವೇ ಹೀಗೆ ಪ್ರತಿಭಟಿಸದೆ ಜೀವಿಸುವುದೇ ಹೆಣ್ಣಿನ ಕರ್ತವ್ಯ ಎಂದವರ ಅಭಿಮತ. ಲಕ್ಷ್ಮಿಯ, ತವರು ಮನೆಯವರು ಇವಳ ಕಷ್ಟ, ನೋವನ್ನು ಸಹಿಸಲಾರದೇ ಸರ್ಕಾರದಿಂದ ಜನತಾ ಮನೆಯೊಂದನ್ನು ಕೊಡಿಸಿ ಅದಕ್ಕೆ ತಾವು ಸಹ ಹಣ ಹಾಕಿ ಒಂದು ಮನೆಯನ್ನು ಅದೇ ಊರಿನಲ್ಲಿ ಕಟ್ಟಿ, ಮಗಳು ಅಳಿಯನನ್ನು ಬೇರೆ ಇರಿಸಿದರು. ಅದೇ ಊರಿನಲ್ಲಿರುವುದರಿಂದ ಅತ್ತೆಯಾದವಳು ದಿನ ಕ್ಕೊಮ್ಮೆಯಾದರೂ ಬಂದು, ಚುಚ್ಚಿ ಮಾತನಾಡಿ, ಹಂಗಿಸಿ ಹೋಗುತ್ತಾಳೆ. ಗಂಡ ದುಡಿದು ತಂದರೂ, ಒಳ್ಳೆಯ ಅಡಿಗೆ ಮಾಡಿದಾಗ ತನ್ನ ಮನೆಯವರಿಗೆ ಹಾಕಲೇ ಬೇಕು ಇಲ್ಲವಾದರೆ, ಹೊಡೆತ ಪ್ರಾರಂಭ. ಒಮ್ಮೊಮ್ಮೆ ಪ್ರೀತಿ ತೋರುವ ಗಂಡನಿಗೆ ಲಕ್ಷ್ಮಿ "ನನಗೆ ಇಷ್ಟೆಲ್ಲ ಹಿಂಸೆ ಕೊಟ್ಟಾಗ ನಾನು ಸತ್ತಿದ್ದರೆ?" ಎಂಬ ಪ್ರಶ್ನೆಗೆ ಆತನಿಂದ, "ನೀನು ಸತ್ತರೆ ಇನ್ನೊಬ್ಬಳು ಸಿಗುತ್ತಾಳೆ" ಎನ್ನುವ ಉತ್ತರ ದೊರೆಯುತ್ತದೆ.

ಇಷ್ಟೆಲ್ಲ ನೋವಿನ ನಡುವೆಯೂ ಲಕ್ಷ್ಮಿ ಹೇಳುತ್ತಾಳೆ ಅತ್ತೆಗೆ ಒಂದು ಮೊಮ್ಮಗುವನ್ನು ಕೊಟ್ಟು ಈ ಮನೆ ಬೆಳಗಿಸಿ, ಅವರೆಲ್ಲರೂ ಸಂತೋಷದಿಂದ ಇರಬೇಕು. ತನ್ನಿಂದಾಗಿ ಈ ಮನೆಯಲ್ಲಿ ಅಶಾಂತಿ ಮೂಡಬಾರದು. ತನಗೆ ಇವರ್ಯಾರು ದ್ವೇಷಿಗಳಲ್ಲ. ಆದರೆ ತನ್ನ ದೈಹಿಕ ದುರ್ಬಲತೆಯಿಂದ ಸಾಧ್ಯವಾಗುತ್ತಿಲ್ಲ ಎನ್ನುವುದರ ಜೊತೆಯಲ್ಲಿ ಆಕೆ ಮತ್ತೆ ಗರ್ಭಿಣಿಯಾಗಿ ಹೆರಿಗೆ ಸಮಯ ಹತ್ತಿರವಾಗುತ್ತಿದೆ. ಮೊದಲಿನಷ್ಟು ಅತ್ತೆಯ ಕಾಟ ಕಮ್ಮಿಯಾದರೂ ಏನಾಗುತ್ತದೋ ಎಂಬ ಆತಂಕ ಲಕ್ಷ್ಮಿಗೆ.

ಅವಿದ್ಯಾವಂತೆಯಾದ ಲಕ್ಷ್ಮಿಯ ಬದುಕು, ಅವಳ ವಿಚಾರವನ್ನು ಕೇಳಿದಾಗ ಹೃದಯ ಮೂಕವಾಗುತ್ತದೆ ದಿಗ್ಭ್ರಮೆ ಉಂಟಾಗುತ್ತದೆ. ತಮ್ಮ ಬದುಕು ಇಷ್ಟೇ ಎಂದು ಒಪ್ಪಿಕೊಂಡು, ಕ್ಷಮಯಾ ಧರಿತ್ರಿಯಾಗಿರುವ ಇಂತಹ ಹೆಣ್ಣು ಮಕ್ಕಳು ನಮ್ಮ-ನಿಮ್ಮೆಲ್ಲರ ಮಧ್ಯೆ ಖಂಡಿತವಾಗಿ ಇದ್ದಾಳೆ.

ತಾರಾ ರಾವ್.
ಹೊನ್ನಾಳಿ

# ವಿಮೋಚನೆಯೆಡೆಗೆ

ಮೂಲ: ಮೈಥಿಲಿ ಶಿವರಾಮನ್
ಅನುವಾದ: ಬಿ. ಎನ್ ಸುಮಿತ್ರಾ ಬಾಯಿ
ವಿಜಯಾದಬ್ಬೆ
ಪ್ರ.: ಮಂಜುಶ್ರೀ ಮುದ್ರಣ
ವಿದ್ಯಾರಣ್ಯಪುರಂ, ಮೈಸೂರು (೧೯೮೬)

## ಸಿದ್ಧರೂಪಗಳ ಪ್ರಭಾವ

ಮಹಿಳೆಯನ್ನು ಯಾವಾಗಲೂ ಇಂಥವನ ಪತ್ನಿ ಅಥವಾ ತಾಯಿ ಎಂದು ಗುರುತಿಸಲಾಗುತ್ತದೆ, ಆದರೆ ಒಬ್ಬ ಪುರುಷನನ್ನು ಒಬ್ಬ ಗಂಡನೆಂದಾಗಲೀ, ತಂದೆಯೆಂದಾಗಲೀ ಸೂತ್ರೀಕರಿಸುವುದಿಲ್ಲ. ಅವನು ಯಾವಾಗಲೂ ಒಬ್ಬ ಇಂಜಿನಿಯರ್, ಒಬ್ಬ ವೈದ್ಯ, ಒಬ್ಬ ಕಲೆಗಾರ ಹೀಗೆ ಗುರುತಿಸಲ್ಪಡುತ್ತಾನೆ. ಉತ್ಪಾದನಾ ಪ್ರಕ್ರಿಯೆಯಲ್ಲಿನ ಅವನ ಪಾತ್ರ ಅಥವಾ ಅವನು ಸಮಾಜಕ್ಕೆ ಹೇಗೆ ಪ್ರಯೋಜನ ಎನ್ನುವುದನ್ನು ಆಧರಿಸಿ ಅವನನ್ನು ವರ್ಣಿಸಲಾಗಿದೆ, ಮಹಿಳೆಯರ ವಿಷಯದಲ್ಲಿ ಹೀಗಾಗುವುದಿಲ್ಲ. ಸಿಮೋನ್ ದ ಬೋವ ಹೇಳುವಂತೆ “ಪುರುಷನನ್ನು “ಮನುಷ್ಯ” ಎಂದೂ ಸ್ತ್ರೀಯನ್ನು “ಹೆಣ್ಣು” ಎಂದೂ ಲಕ್ಷೀಕರಿಸಲಾಗುತ್ತದೆ. ಮಾನವಳಂತೆ ಆಕೆ ವರ್ತಿಸಿದಾಗೆಲ್ಲ ಅದನ್ನು “ಪುರುಷನೊಡನೆ ಸ್ಪರ್ಧಿಸುವ ಪ್ರಯತ್ನ” ವೆಂದು ನಿಂದಿಸಲಾಗುತ್ತದೆ.”

ಪುರುಷನು ಹುಟ್ಟುಹಾಕಿರುವ “ಸ್ತ್ರೀ ಸಂಸ್ಕೃತಿ” ಯು ಹೆಚ್ಚಾಗಿ ಮೇಲು ವರ್ಗಕ್ಕೆ ಹಾಗೂ ಕಡಿಮೆ ಪ್ರಮಾಣದಲ್ಲಿ ಕೆಳವರ್ಗಕ್ಕೆ ಅನ್ವಯಿಸುತ್ತದೆ. ಇದು ಕೇವಲ ಅಲಂಕಾರದ ವಸ್ತುವಾದ ದುರ್ಬಲ ಜೀವಿಯನ್ನು ಆದರ್ಶ ಸ್ತ್ರೀ ಎಂದು ಗುರುತಿಸುತ್ತದೆ. ಅವಳ ದುರ್ಬಲತೆ ಹಾಗೂ ಅಧೀನತೆಯನ್ನು ಸಾಕಷ್ಟು ದುಡಿಸಿಕೊಂಡಿದೆ. ಹೆಂಗಸು ಯಾವತ್ತೂ “ಆಪತ್ತಿಗೆ ಸಿಕ್ಕಿದ ಮುಗ್ಧೆ” ಹಾಗೂ ಗಂಡಸು “ದೀನ ರಕ್ಷಕ ವೀರ”, ಅವಳಿಗೆ ಆಶ್ರಯದಾತ. ಪ್ರತಿಯೊಬ್ಬ ಸರ್ವಾಧಿಕಾರಿಯೂ ತನ್ನ ಜನರ ಪಾಲಿಗೆ ಪ್ರಾರಂಭದಲ್ಲಿ ಉದಾರಿ, ರಕ್ಷಕನಾಗಿಯೇ ಇದ್ದ ಎಂಬುದನ್ನು ನಾವು ಇಲ್ಲಿ ನೆನೆಯಬೇಕು.

ಮಾನವನ ಪ್ರಗತಿ — ಉದಾ: ವೈಜ್ಞಾನಿಕ ಸಂಶೋಧನೆ—ಗೆ ಮಹಿಳೆಯ ಕೊಡುಗೆ ಗಣನಾರ್ಹ ಎಂಬುದೇ ಆಕೆಯ ಪರಾವಲಂಬಿತನಕ್ಕೆ ಸ್ಪಷ್ಟವಾದ ಸಾಕ್ಷಿ. ಅವಳ ದೈಹಿಕ ಶ್ರಮ ಅನೇಕ ರಾಜ್ಯಗಳನ್ನು ಕಟ್ಟಿದ್ದಿರಬಹುದು. ಆದರೆ ರಾಜಕೀಯ ಅಧಿಕಾರದಲ್ಲಿ ಆಕೆಗೆ ಪಾಲು ಸಿಕ್ಕಿದ್ದು ತೀರ ಅಪರೂಪ. ಒಂದಲ್ಲ ಒಂದು ಕಾರಣದಿಂದ ಮಹಿಳೆಗೆ ತನ್ನ ಸೃಜನಾತ್ಮಕ ಶಕ್ತಿಯನ್ನು ಬೆಳೆಸಿಕೊಳ್ಳುವ ಅವಕಾಶ ದೊರಕಲಿಲ್ಲ ಎಂಬುದು ಇದರಿಂದ ಸಿದ್ಧವಾಗುತ್ತದೆ. ವಾಸ್ತವತೆಯನ್ನು ಗ್ರಹಿಸಲು, ಒಡಲಾವಣೆಯನ್ನುಂಟುಮಾಡಲು ಪ್ರಕೃತಿಯೊಂದಿಗೆ ನಿರಂತರ ಹೋರಾಡುತ್ತಾ ಆ ಪ್ರಕ್ರಿಯೆಯಲ್ಲಿ ತಾನೂ ಬದಲಾಗುತ್ತಾ ಹೋಗುವ ಮನಷ್ಯ ಜೀವಿಯಾಗಿ ಮಹಿಳೆ ತನ್ನನ್ನು ಪ್ರತಿಪಾದಿಸಿಕೊಂಡಿಲ್ಲ. ಮೃದುತ್ವ, ಅತಿ ಜಾಗರೂಕತೆ, ಅಪ್ರೈಚಾರಿಕತೆ, ಭಾವುಕತೆಯೊಂದಿಗೆ ಸಾಂಪ್ರದಾಯಿಕವಾಗಿ ಗುರುತಿಸಲ್ಪಡುತ್ತಿರುವ ಹೆಂಗಸಿನ ವ್ಯಕ್ತಿತ್ವದ ಬೆಳವಣಿಗೆಗೆ ಇದು ಹಾನಿಕಾರಕವಾಗಿದೆ.

ಈ ಮೇಲಿನ ಮಾತುಗಳು ಹಿಂದುಳಿದ ರಾಷ್ಟ್ರಗಳ ಮಹಿಳೆಯರಿಗಷ್ಟೇ ಅಲ್ಲದೆ ಔದ್ಯೋಗಿಕವಾಗಿ ಮುಂದುವರೆದ ಪಶ್ಚಿಮದ ಬಂಡವಾಳಶಾಹಿ ರಾಷ್ಟ್ರಗಳ ಮಹಿಳೆಯರಿಗೂ ಅನ್ವಯವಾಗುತ್ತವೆ. ಪಶ್ಚಿಮದ ಸಮೂಹ ಮಾಧ್ಯಮಗಳಲ್ಲಿ ಎರಡು ಮಾದರಿಗಳು ಪ್ರಚಾರದಲ್ಲಿವೆ. ಒಂದು ಯಾವಾಗಲೂ

ಚೌಕಾಶಿ ವ್ಯಾಪಾರಕ್ಕಾಗಿ ಹಾತೊರೆಯುವ, ಯೋಚಿಸದೆ ಬೇಡದ ವಸ್ತುಗಳನ್ನೆಲ್ಲ ಸಂಗ್ರಹಿಸುವ ಹರುಕು ಬುದ್ಧಿಯ ಮೂರ್ಖ ಗೃಹಿಣಿ. ಮತ್ತೊಂದು—ಕೃತಕ ನಗೆಯೊಂದಿಗೆ ಆಫ್ಟರ್ ಶೇವ್‌ಲೋಷನ್ನನ್ನು ಮಾರುವ ಅಥವಾ ವಾಹನವೊಂದರ ಜಾಹಿರಾತಿಗೆ ನಗ್ನವಾಗಿ ನಿಲ್ಲಬೇಕಾಗುವ ಲೈಂಗಿಕ ವಸ್ತು. ಜೂಲಿಯಟ್ ಮಿಷಲ್ ಹೇಳುವಂತೆ "ವೇಶ್ಯೆಯರಾಗಿಲ್ಲದಿದ್ದರೆ ಪ್ರಚಾರೋದ್ಯಮಗಳಿಗೆ ಮಾಡೆಲ್‌ಗಳಾಗಿ ಹೆಂಗಸರು ತಮ್ಮ ದೇಹಗಳನ್ನು—ಮನುಷ್ಯರು ಶ್ರಮಿಕ ಶಕ್ತಿಯನ್ನು ಮಾರುತ್ತಾರೆ. ಒಬ್ಬ ಕೆಲಸಗಾರ ತಾನು ಉತ್ಪಾದಿಸಿದ ವಸ್ತುವಿನಿಂದ ದೂರವಾಗುವಂತೆ ಒಬ್ಬ ಹೆಂಗಸು ಮಾರಾಟಕ್ಕಿಟ್ಟ ತನ ದೇಹದಿಂದ ದೂರವಾಗುತ್ತಾಳೆ." ಮಾರಾಟ ಮಾಡಲು ಅವಳು ಸಹಾಯ ಮಾಡುವ ವಸ್ತುಗಳ ಉತ್ಪಾದನೆಯಲ್ಲೂ ಅವಳ ಪಾತ್ರವಿದೆಯೇ ಎಂಬುದು ಯಾವಾಗಲೂ ತೋರಿಸಲ್ಪಟ್ಟಿಲ್ಲ. ಬದಲಿಗೆ ಮಹಿಳೆ ಯಾವತ್ತೂ ಬಳಕೆದಾರಳಾಗಿ, ಪುರುಷ ಯಾವತ್ತೂ ಉತ್ಪಾದಕನಾಗಿ ಇರುವ ಚಿತ್ರವೇ ಕಾಣುತ್ತದೆ. ಹೆಣ್ಣಿನ ಸತ್ತ ಹೆಣೆದ ವಿಚಾರಗಳು ಹಾಗೂ ನಂಬಿಕೆಗಳ ಚೌಕಟ್ಟಿನ ಮಂತ್ರಶಕ್ತಿಗೆ ಮುಗ್ಧಳಾದ ಅಮೆರಿಕನ್ ಗೃಹಿಣಿ ತಾನೇ ಪರಮಸುಖಿ ಎಂದು ಭಾವಿಸಿದ್ದಳು. ಆದರೆ ಈ ಪ್ರಭಾವಳಿ ಅರವತ್ತರ ದಶಕದ ಉತ್ತರಾರ್ಧದಲ್ಲಿ ನಡೆದ ಮಹಿಳಾ ಸ್ವಾತಂತ್ರ್ಯ ಚಳವಳಿಯ ಬೆಳಕಿನಲ್ಲಿ ತನ್ನ ರೋಮ್ಯಾಂಟಿಕ್ ಪ್ರಭೆಯನ್ನು ಕಳೆದುಕೊಂಡಾಗ ತನ್ನ ದಾರಿಗೆ ಅಡ್ಡ ಬರದಂತೆ, ಹೆಂಗಸು ತನ್ನ ಕಪಿಮುಷ್ಟಿಯೊಳಗೇ ಉಳಿಯುವಂತೆ ಗಂಡಸು ಮಾಡಿದ ಕುಯುಕ್ತಿಯದು ಎಂಬ ನಿಜಸ್ವರೂಪದ ಅರಿವಾದಾಗ ಆಘಾತವೇ ಆಯಿತು.

"ನಾನೊಬ್ಬಳೇ ಇರುವಾಗ ನಾನು ಏನೂ ಅಲ್ಲ. ಗಂಡ ಅಥವಾ ಮಕ್ಕಳಿಗೆ ನಾನು ಬೇಕಾದಾಗ ನನಗೂ ಅಸ್ತಿತ್ವವಿದೆಯೆಂದು ನನಗನಿಸುತ್ತದೆ. ನನ್ನ ಗಂಡ ಹೊರಗಿನ ವಾಸ್ತವ ಜಗತ್ತಿಗೆ ಹೋಗುತ್ತಾನೆ. ನಾನು ನನ್ನ ಹೊರತು ಬೇರಾರಿಗೂ ಬೇಡದ ನಾನೇ ಸೃಷ್ಟಿಸಿಕೊಂಡ ಕೆಲಸಗಳನ್ನು ಮಾಡುತ್ತಾ ಈ ಮನೆಯ ಕಲ್ಪಿತ ಪ್ರಪಂಚದೊಳಗೇ ಇರುತ್ತೇನೆ. ನಾನು ಯಾವುದೋ ರಹಸ್ಯ ಪ್ರಕ್ರಿಯೆಯಲ್ಲಿ ತೊಡಗಿರುವಂತ ಕಾಣುತ್ತದೆ"— ಎಂಬುದು ಪ್ರಪಂಚದ ಅತ್ಯುತ್ಕೃಷ್ಟ ಯಂತ್ರ ಸುಸಜ್ಜಿತ ಅಡಿಗೆಮನೆಯ ಸೌಲಭ್ಯ ಹೊಂದಿರುವ ಮೆರಿಡಿತ್ ಟ್ರ್ಯಾಕ್ಸ್‌ನಂಥ ಮಹಿಳೆಯ ಅನಿಸಿಕೆ. ಇದು ಅಮೆರಿಕದ ಸರಾಸರಿ ಮಹಿಳೆಯ ಹಣೆಬರಹವಾದರೆ ಅವಳ ಭಾರತೀಯ ಸೋದರಿಯ ಗತಿ ಏನು? ಬಿಡುಗಡೆಯಿಲ್ಲದ ಬಡತನ, ಅಂಧಶ್ರದ್ಧೆ, ಹಿಂಸಾತ್ಮಕ ಸಾಮಾಜಿಕ ನಿಷೇಧಗಳ ಹಾಗೂ ಪಾಶವೀ ಪುರುಷ ಪ್ರಾಧಾನ್ಯದಿಂದ ಹತ್ತಿಕ್ಕಲ್ಪಟ್ಟ ಆಕೆ ಇಂದಿಗೂ ಅಕ್ಷರಶಃ ಹೊರೆಹೊರುವ ಪ್ರಾಣಿಯಾಗಿ ಉಳಿದಿದ್ದಾಳೆ.

### ಮಹಿಳೆಯ ಪತನ:

ಮಹಿಳೆಯ ಪತನ ಹೇಗೆ ಆರಂಭವಾಯಿತು, ಆಕೆ ಈ ನೆಲದ ಅನಿಷ್ಟವಾದದ್ದು ಹೇಗೆ ಎಂಬುದನ್ನು ಇಲ್ಲಿ ಸ್ಥೂಲವಾಗಿ ಗಮನಿಸಬಹುದು. ಮಹಿಳಾ ಸಮಸ್ಯೆಯನ್ನು ಚಾರಿತ್ರಿಕ ದೃಷ್ಟಿಯಲ್ಲಿಟ್ಟು ನೋಡಿದ ಕೆಲವು ಮುಖ್ಯ ಪ್ರಯತ್ನಗಳ ಸಾರಾಂಶವನ್ನು ಮಾತ್ರ ಕ್ರೋಢೀಕರಿಸಿ, ಈ ಸಮಸ್ಯೆಯನ್ನು ಅರ್ಥಮಾಡಿಕೊಳ್ಳಲು ಯಾವ ಪ್ರಮಾಣದಲ್ಲಿ ಇವು ಸಹಾಯ ಮಾಡುತ್ತವೆ ಎಂಬುದನ್ನ ನೋಡುವುದಷ್ಟೇ ಇಲ್ಲಿನ ಸೀಮಿತ ಉದ್ದೇಶ. ಇಲ್ಲಿ ಮೊದಲು ಹೆಸರಿಸಬೇಕಾದದ್ದು ಎಂಗಲ್ಸ್‌ನ "ದಿ ಆರಿಜಿನ್ ಆಫ್ ದಿ ಫ್ಯಾಮಿಲಿ ಪ್ರೈವೇಟ್ ಪ್ರಾಪರ್ಟಿ ಅಂಡ್ ಸ್ಟೇಟ್" ಎಂಬ ಕೃತಿ. ಹೆಂಗಸಿನ ಇತಿಹಾಸವನ್ನು ಅರ್ಥಮಾಡಿಕೊಳ್ಳುವಲ್ಲಿ ಇದೊಂದು ಅನುಪಮ ಕೊಡುಗೆ. ಮಹಿಳೆಯು ಸಹಜವಾಗಿ ಕೀಳು ಎಂಬ ಪ್ರಚಲಿತ ಧೋರಣೆಯೊಂದಿದೆ. ಈ ಧೋರಣೆಯು, ದೇವರೇ ಅವಳನ್ನು ಹಾಗೆ ಚಿತ್ರಿಸಿದ ಎಂಬ ಸರಳ ಸಿದ್ಧಾಂತ ಅಥವಾ ಮನುಷ್ಯ ಭಾವನೆಗಳು ಮತ್ತು ಸಾಂಪ್ರದಾಯಗಳು ಸಾಂಸ್ಕೃತಿಕ ಅಂಶಗಳಿಂದ ರೂಪಿತವಾಗಿಲ್ಲ. ಬದಲಿಗೆ ಅನುವಂಶಿಕ ಪ್ರವೃತ್ತಿಗಳಿಂದಾದುದು ಎಂಬ ವಾದವನ್ನು ಅವಲಂಬಿಸಿದೆ. ಈ ಧೋರಣೆಯನ್ನು ವಿರೋಧಿಸುವುದು ಎಂಗಲ್ಸ್‌ನ ಕೃತಿಯ ಮುಖ್ಯ ಹಂಬಲ.

# ಅವ್ವ ಹಾಡಿದ ಹಾಡು

ಚಂಪಾವತಿ ಎಚ್. ಎಸ್.

ಅಂಗೈಯಗಲದ ಬಡಾಕ
ಮುಷ್ಠಿಯೊಳಗಿಟ್ಟುಕೊಂಡು
ಬೆಂದ ಅಕ್ಕಿಯಲ್ಲಿ
ತರಕಾರಿ ಸಿಪ್ಪೆಯಲ್ಲಿ
ಉಪ್ಪು ಖಾರ ಹುಣಿಸೇ ಹಣ್ಣುಗಳ
ಬೀಜಗಳಲ್ಲಿ ಉಸುರಿ ಹಾಡಿದ್ದ
ಅವ್ವ ಇನ್ನಿಲ್ಲ
ಆಕೆ ಹಾಡಿದ ಹಾಡ
ಕೊನೆಯಾಗಿಸಲಿಲ್ಲ.

ಮಸಿ ಹಿಡಿದ ಮನೆಯ
ಕಸ ಹೊಡೆದು ಸಾರಿಸಿ
ರಂಗವಲ್ಲಿ ಇಟ್ಟ ಈಕೆ
ಎಳೆ ಎಳೆಗಳು, ನೂಲಿನೆಳೆಗಳು
ಬಾಳು ಜೀವದೆಳೆಗಳ ಕಟ್ಟಿ,
ಕುಟ್ಟಿ ಸಂಸಾರ ಮಾಡಿ ಹಾಡಿದಳು
ಮುಗಿಸಲಿಲ್ಲ ಈಕೆಯ ಸಂಸಾರದ ಹಾಡು.

ಕೊಟ್ಟಿಗೆಯ ದನ ಕಳೆದು ಹೋಗಿ
ಬರಲಿಲ್ಲ ಮನೆಗೆ ಮೂರು ದಿನ
ಕಣ್ಣಲ್ಲಿ ಕಣ್ಣಿಟ್ಟು ಕಾದ ಹೆಣ್ಣಿನ
ಮುಖ ಮಾರಿಯೆಲ್ಲ ಕಪ್ಪು
ಕಣ್ಣಿನ ಸುತ್ತ ಎಣ್ಣೆಗಪ್ಪು.
ಕಣ್ಣೀರ ಕರೆದು ಹಾಡಿದ
ಬೆಚ್ಚಗಿದ್ದ ಹೆಣ್ಣು
ತಣ್ಣಗಾದಳು, ತಣಿದು ಹೋಗಲಿಲ್ಲ
ಈಕೆ ಹಾಡಿದ ಹಾಡು.

ಬತ್ತಲಿಲ್ಲ ಮೈಯೊಳಗಿನ ಕಾಮ
ತೊಯ್ದು ತಲೆ ದಿಂಬುಗಳೆಷ್ಟೋ
ಇಡಲಿಲ್ಲ ಕಾಲ ಹೊಸ್ತಿಲ ಹೊರಗೆ
ಕಟ್ಟಿಟ್ಟುಕೊಂಡ ಆಸೆಗಳೆಷ್ಟೋ
ಕಾದು ಬೆಪ್ಪು ಬೆಪ್ಪಾದ ಅವ್ವನಿಗೆ
ಸಿಕ್ಕಿದ್ದು ಬದುಕಿನಲ್ಲಿ ಕಪ್ಪೆ ಚಿಪ್ಪು
ಮುತ್ತಿರದ, ರತ್ನಗಳಿರದ ಚಿಪ್ಪು.
ಇಡಿ ಇಡಿಯಾದ ಹಾಡ
ಅವ್ವ ಹುಡಿ ಹುಡಿಯಾಗಿ ಹಾಡಿದ್ದು ಹೇಗೆ?

ಇಟ್ಟ ರಂಗೋಲಿಯೊಳಗೆ
ಮನೆಯ ಕಂಬಗಳೊಳಗೆ
ಮಲ್ಲಿಗೆಯ ಬಳ್ಳಿಯೊಳಗೆ
ಕನಕಾಂಬರದ ಕೆಂಪಿನೊಳಗೆ

ಯಾರೊಟ್ಟಿಗೆ ಉಸಿರಿ
ನಿಟ್ಟುಸಿರಿಟ್ಟು ಹಾಡಿದಳೋ
ಕೊನೆಯಾಗದ ಹಾಡು.

೦ ೦ ೦ ೦ ೦ ೦ ೦

ಸತ್ತ ಅಪ್ಪನ ಬದುಕ
ಋಣವಾಗಿ ಕಟ್ಟಿಟ್ಟುಕೊಂಡು
ಕಟ್ಟಿಟ್ಟ ಬುತ್ತಿಯೆಲ್ಲ
ಖರ್ಚು ಮಾಡುತ್ತಾ
ಹಾಡಬೇಕು.

ತೂಗಿ ಜೋಗುಳ ಹಾಡಿದರೂ
ಮಲಗದ ಮಗಳು
ಎದೆಯೊಳಗೆ ಕೈ ಹಾಕಿ
ಹಿಡಿದು ಮಲಗುವೆ "ಅಮ್ಮ"
ಎಂದು ಸಂತೃಪ್ತಿಯಿಂದ
ಮುಚ್ಚಿದರೆ ಕಣ್ಣು
ತಾಯ ಹಾಲಿನ ಋಣದ ನೆನಪು
ಆಕೆಯ ಜೋಗುಳದ್ಹಾಡಿನ ನೆನಪು.

ತಾಯ ಮಣ್ಣಿನ ಋಣ
ಬೇಕೆಂದು ಚಡ ಪಡಿಸಿ ಮನಸು
ನೂರಾರು ಮೈಲಿ ಓಡಿ
ಕಣ್ಣಿಗಿನ ಶವ ಅಪ್ಪಿ
ತೆಕ್ಕೆ ಹಾಕಿವರೂ
ಕಿತ್ತೊಗೆಯಲಾಗಲಿಲ್ಲ
ಆಕೆಯ ಹಾಡಿನ ಬೇರು

ಎಲ್ಲಿ ಕಾದಿದ್ದೆ ಸಾವೇ ನೀನು?
ಮೆಟ್ಟಲೇರಿ ಬರುವಾಗ
ದೀಪ ಹಚ್ಚೆಂದಳು
ಅಮ್ಮ ಕರೆಯುವಳೆಂದಳು
ಏನೇನೋ ಕೊರಗಿದಳು
ಬದುಕ ಅಲ್ಲಾಡಿಸಿದ
ತಾಯ ಸಾವ ಬೇರ
ಹಾಡ ಬೇರ ಹೇಗೆ ಕಿತ್ತಲಿ?
ತಾಯಿ ಹಾಡಿದ ಹಾಡ
ಹಾಡಿ ಕಣ್ಣೀರ ಸುರಿಸಿದರೆ
ನಾಲ್ಕು ವರುಷದ ಮಗಳು
ಸತ್ತಿಲ್ಲ ಅಜ್ಜಮ್ಮ
ಸುಮ್ಮನೆ ಹಾಕಿದ್ದಾರೆ ಮಣ್ಣಲ್ಲಿ ಅಲ್ಲವ್ಮಾ
ಎನ್ನುತ್ತಾಳೆ.
ಕೊನೆಯಾಗಿಸಲಿಲ್ಲ ಈ ಹೆಣ್ಣು ಹಾಡ
ತರಂಗಗಳು ನನ್ನೊಳಗೆ
ನನ್ನ ಕುಡಿಯೊಳಗೆ
ಈಕೆ ನನ್ನೊಳಗಿನ ಹೆಣ್ಣು
ನನ್ನ ಮೈಯೊಳಗಿನ ಕಣ್ಣು.

# ಮಹಿಳಾ ಚಳವಳಿ--ರಾಷ್ಟ್ರೀಯ ಚಳವಳಿ

## ರೋಡಾ ರೆಡ್‌ಡಾಕ್‌ರವರ ಕೆಲವು ಅಭಿಪ್ರಾಯಗಳು

ಮಹಿಳಾ ಚಳವಳಿಗೆ ರಾಷ್ಟ್ರೀಯ ಚಳವಳಿಯ ಜೊತೆಗೆ ಇರುವ ಸಂಬಂಧ ಬಹಳ ಮುಖ್ಯವಾದುದು. ಪ್ರಪಂಚದ ಬಹಳಷ್ಟು ದೇಶಗಳಲ್ಲಿ ಮಹಿಳೆಯರು ರಾಷ್ಟ್ರೀಯ ಹೋರಾಟಕ್ಕಾಗಿ ಪುರುಷರ ಜೊತೆ ಜೊತೆಯಾಗಿ ಭಾಗಿಯಾಗಿದ್ದಾಗ್ಯೂ ಸಹ ಅವರ ಸ್ಥಿತಿ-ಗತಿಗಳು ಪ್ರಗತಿ ಹೊಂದಿದ್ದು ಕಡಿಮೆ. ಫ್ರಾಂಜ್ ಫ್ಯಾನನ್ ಆಲ್ಜೀರಿಯಾದ ಸ್ವಾತಂತ್ರ್ಯದ ಯುದ್ಧದ ಬಗ್ಗೆ ಬರೆಯುವಾಗ ಮಹಿಳೆಯರ ಸ್ಥಿತಿ-ಗತಿ ಕುರಿತು ಬರೆಯುತ್ತಾನೆ. ಆಲ್ಜೀರಿಯಾದ ಮಹಿಳೆಯರು ಅಲ್ಲಿ ಕ್ರಾಂತಿ-ಯುದ್ಧ ನಡೆಯುವ ಮೊದಲು ತಮ್ಮ ತಾಯಿ | ಗಂಡ, ಇತರರ ಜೊತೆಯಿಲ್ಲದೇ ಮನೆಯಿಂದ ಹೊರ ಬಂದವರಲ್ಲ. ಆದರೆ ಯುದ್ಧ ಪ್ರಾರಂಭವಾದಾಗ ಕ್ರಾಂತಿಯ ಮುಖ್ಯವಾದ ಕೆಲಸಗಳನ್ನು ಮಹಿಳೆಯರಿಗೆ ರಾಷ್ಟ್ರ ವಹಿಸಿತು. ಈ ಯುದ್ಧದಲ್ಲಿ ಭಾಗಿಯಾದಾಗ ಈ ಹೆಂಗಸರು ರೈಲುಗಳಲ್ಲಿ ಸ್ವತಂತ್ರವಾಗಿ ಪ್ರಯಾಣಿಸತೊಡಗಿದರಲ್ಲದೇ ಎಷ್ಟೋ ರಾತ್ರಿಗಳಲ್ಲಿ ಗೊತ್ತು-ಪರಿಚಯವಿಲ್ಲದ ಕುಟುಂಬಗಳೊಡನೆ, ಪುರುಷರೊಡನೆ ಕಳೆಯತೊಡಗಿದರು. ಪುರುಷ ಪ್ರಧಾನ ಮೌಲ್ಯಗಳಲ್ಲಿ ಮುಖ್ಯವಾದ ಅಸೂಯೆ, ಅನುಮಾನ ಇತ್ಯಾದಿಗಳು ಕ್ರಾಂತಿಯ ಸಂದರ್ಭದಲ್ಲಿ ಕರಗಿಹೋದವು. ಯುದ್ಧದಲ್ಲಿ ಭಾಗಿಯಾದಾಗ ತಂದೆ | ಗಂಡ | ಮಗ ಇವರು ಪುರುಷ-ಸ್ತ್ರೀ ಸಂಬಂಧವನ್ನು ಹೊಸದೊಂದು ಬೆಳಕಿನಲ್ಲಿ ಕಂಡರು. ರಾಷ್ಟ್ರದ ಹೊಸ ದಿಗಂತವನ್ನು ಸೃಷ್ಟಿಸುವಲ್ಲಿ ಮಹಿಳೆಯರು ಸೃಷ್ಟ್ಯಾತ್ಮಕ ಪಾತ್ರ ವಹಿಸುವುದನ್ನು ಕಂಡರು. ಆದರೆ ಈ ಕ್ರಾಂತಿ ಮುಗಿದ ತಕ್ಷಣದ ಸಂದರ್ಭದಲ್ಲಿ ಗಂಡು-ಹೆಣ್ಣಿನ ಮಧ್ಯೆ ಮತ್ತೆ ಏರು-ಇಳುವಿನ ಸಂಬಂಧ ಪ್ರಾರಂಭವಾಯಿತಲ್ಲದೇ ಪಿತೃ ಪ್ರಧಾನ ಮೌಲ್ಯಗಳು ವಿಜೃಂಭಿಸಿ ಹೆಡೆಯಾಡತೊಡಗಿದವು. ಮಕ್ಕಳನ್ನು ಹೆತ್ತು ಕುಟುಂಬ, ಸಮಾಜ, ರಾಷ್ಟ್ರವನ್ನು ಬೆಳೆಸುವ ಹೆಂಗಸರು ಭೂಮಿಗೆ ಸರಿಸಮಾನರಾದುದರಿಂದ ರಾಷ್ಟ್ರದ ಸಂಸ್ಕೃತಿಯನ್ನು ಉಳಿಸುವ ಚಿಹ್ನೆಗಳಾದುದರಿಂದ ಅವರ ಮೇಲೆ ಹಿಂಸಾತ್ಮಕ ರೀತಿಯ ಒಡೆತನ ಅಗತ್ಯ ಎಂದು ಇವರು ಭಾವಿಸಿದರು. ಪುರುಷನಿಗೆ ತನ್ನ ಪುರುಷತ್ವದ ಒಡೆತನವನ್ನು ಉಳಿಸಿಕೊಳ್ಳುವುದೂ ಸಹ ಇದರಿಂದ ಸಾಧ್ಯವಾಯಿತು. ಈ ರೀತಿ ಯುದ್ಧದ ನಂತರ ಮಹಿಳೆಯರ ವ್ಯಕ್ತಿತ್ವದ ಪ್ರಶ್ನೆಗಳು ವೈಯಕ್ತಿಕವೆಂದೋ ಸ್ವಂತದ್ದೆಂದೂ ತೀರ್ಮಾನವಾಗಿ ರಾಷ್ಟ್ರದ ಹಿತಾಸಕ್ತಿಯ ಹೆಸರಿನಲ್ಲಿ, ಸಂಸ್ಕೃತಿಯ ಹಸರಿನಲ್ಲಿ ಹಿಂದಕ್ಕೆ ತಳ್ಳಲ್ಪಡುತ್ತವೆ.

ಯುದ್ಧ ಅಥವಾ ಕ್ರಾಂತಿಯ ಸಂದರ್ಭದಲ್ಲಿ ಬಹಳಷ್ಟು ಕ್ರಿಯಾತ್ಮಕವಾಗಿರುವ ಮಹಿಳೆಯರು ಆ ನಂತರದಲ್ಲಿ ಏಕೆ ತಮ್ಮನ್ನು ಸೀಮಿತಗೊಳಿಸುವ ಸಂದರ್ಭಗಳ ವ್ಯವಸ್ಥೆಗೆ ಹಿಂತಿರುಗಿ ಹೋಗಿ ಬಿಡುತ್ತಾರೆ ಎಂಬ ಪ್ರಶ್ನೆಯೂ ಮುಖ್ಯವಾದದು. ಇದಕ್ಕೆ ಒಂದು ಕಾರಣವೆಂದರೆ ಈ ರೀತಿಯ ಕ್ರಾಂತಿಯ ಚಟುವಟಿಕೆಯಲ್ಲಿ ಭಾಗವಹಿಸುವ ಮಹಿಳೆಯರು ಯಾವುದೇ ಮುಖ್ಯವಾದ ನಿರ್ಧಾರಯುತ ಸ್ಥಾನದಲ್ಲಿ ಇರುವುದೇ ಇಲ್ಲ. ಮಹಿಳಾ ಗುಂಪುಗಳಲ್ಲಿ ಮಾತ್ರ ನಿರ್ಧರಿಸುವ ಸ್ಥಾನ — ಮಾನಗಳಲ್ಲಿ ಇರುತ್ತಾರೆ. ಅಥವಾ ಈ ರೀತಿ ನಿರ್ಧಾರ ತೆಗೆದುಕೊಳ್ಳುವ ಸ್ಥಾನ-ಮಾನ ಹೊಂದಿದ ಹೆಂಗಸರು ಪುರುಷ ಪ್ರಧಾನ ಮೌಲ್ಯದ ಎಲ್ಲಾ ತಂತ್ರಗಳನ್ನೂ ರೂಢಿಸಿಕೊಂಡು ಬಿಟ್ಟಿರುತ್ತಾರೆ. ಇಂತಹವರು ಹೊಸ ರೀತಿಯ ವ್ಯಕ್ತಿತ್ವವನ್ನು ಪಡೆದುಕೊಂಡ ಹಮ್ಮಿನಲ್ಲಿ ಪುರುಷರಿಗಿಂತ ಹೆಚ್ಚು ಶೋಷಕರಾಗಿರುತ್ತಾರೆ.

ಇನ್ನೊಂದು ಮುಖ್ಯ ಕಾರಣವೆಂದರೆ ಮಹಿಳಾ ಚಳುವಳಿಯ ಪ್ರಶ್ನೆಗಳು ಕ್ರಾಂತಿಯ ಪೂರ್ವದಲ್ಲಾ

೧೮ನೇ ಪುಟ ನೋಡಿ

# ಉರಿವ ಇಳೆ ಊರ್ಮಿಳೆ

ವಿನಯಾ ನಾಯಕ.

1

ಯಾರೋ ಕೂಗಿ ಕರೆದಂತಾಗಿ
ಕಳವಳಿಸಿ ಧಿಗ್ಗನೆದ್ದರೆ
ನಾರುಡೆಯುಟ್ಟು ನಿಸೂರಾಗಿ
ನಡೆದು ಬಿಟ್ಟವನ ನೆರಳು
ಕಿಟಕಿಯ ಸರಳುಗಳಿಗೆ ಪೋಣಿಸಿದ ಕಂಬನಿಯಲ್ಲಿ
ಫಕ್ಕನೇ ಮಿಂಚಿದ್ದು
ಕೇದಗೆಯ ಹೊಡೆ ಬಿರಿದಂಥ
ಮಿಥಿಲೆಯ ಮಣ್ಣ ನೆನಪು

2

ತನ್ನದೇ ಹೆಜ್ಜೆಯಿಲ್ಲದವನೊಡನೆ
ಸಪ್ತಪದಿ ತುಳಿದೆನೇ ನಾನು?
ಉದುರಿದ ಪಾರಿಜಾತಕ್ಕೂ
ಮುದುರುತ್ತಿದ್ದ ಮುಗ್ಧ ಹುಡುಗಿ!
ಕಣ್ಣ ಬೊಗಸೆ ತುಂಬ ಕನಸ ತುಂಬಿ
ಅಗೆದಷ್ಟೂ ಮೊಗೆವ ಮಕರಂದ ಹೊತ್ತು
ಅಯ್ಯೋಧ್ಯೆಗೆ ಬಂದೆ
ಅಯ್ಯೋ.........

3

ಅಂದು ಪ್ರಸ್ತದ ರಾತ್ರಿ
ನನ್ನ ಮದರಂಗಿ ಕುಂಚಿತ ಅಂಗಾಲಿಗೆ
ಎಣ್ಣೆ ನೀವುತ್ತ ಅವ್ವ ಬಿಕ್ಕಿದ್ದು ಯಾಕೆ?
ಹೋಗಿ ಕೇಳಲೇ ನ್ಯಾಯ, ಜಗವೇತ್ರ ಜನಕನಲಿ?
"ಹಿರಿಯಕ್ಕನ ಹಕ್ಕ ಕೇಳಿಲ್ಲ
ಸ್ವಯಂವರದ ಸಂಭ್ರಮಕ್ಕಲ್ಲ
ಪಟ್ಟದ ಆಸೆಯಿರಲಿಲ್ಲ
ಬಿಳಿ ಬಿಳಿ ಹಂಸದಂತೆ ಪುಟಿಯುವ
ಈ ಹೆಣ್ತಕನ್ಕೂ ಕೊಳ್ಳಿಯಿಟ್ಟವರ್‍ಯಾರು?"
ಮಮತೆಯ ಮುದಿ ಎದೆಗೆ
ಪ್ರಶ್ನೆಯಾಗಲೆ ನಾನು?
'ಹುಲ್ಲ ಹೂವೂ ತುಳಿಯದಂಥಡಿಯಿಡುತ್ತಿದ್ದ
ಪುಟ್ಟ ಊರ್ಮಿ!'

4

ಕಮಲದಳದಲಿ ಹೊಳೆವ ಇಬ್ಬನಿಯ ಹುಂಡೆಂದು
ಹರಳು ಗಟ್ಟಿದ ಕಣ್ಣೀರಿಗೆ ಕಂದ
ಕೈ ತಟ್ಟಿ ನಕ್ಕಿದ್ದರೆ......
ನಿರಿ ದಡವಿ ಅತ್ತಿದ್ದರೆ......
ಬೇಡ ಬಿಡು,

ಮತ್ತೊಬ್ಬ ಸಾವಿತ್ರಿ ಇಲ್ಲ ಊರ್ಮಿಳೆ
ಈ ಹಾಳು ವಂಶ ಬೆಳೆಯಬೇಕೇಕೆ?

5

ಯಾರವಳು? ಅತ್ತೆ. ಎಷ್ಟನೆಯವಳು?
ಬೇಸರಾದರೆ ಮಗು,
"ಗುರುಸೇವೆ" ಮಾಡೆಂದವಳು
ಒತ್ತರಿಸಿ ಒತ್ತರಿಸಿ ಬಂದ ಭಾವ
ತುಟಿ ದಾಟಲಿಲ್ಲ
ಹಾಳು ಹೆಣ್ಣಿನ ಜನ್ಮ!
ನಗುವುದು ಅಳುವುದು ಮುಗಿವುದು
ಹವಿನಾಲ್ಕಕ್ಕೇ

6

ನೀ ನನ್ನ ಮುನಿಕ್ಕೆ ಬೆನ್ನ ತಿರುಗಿಸಿ
ನಡೆವ ಮುಂಚೊಮ್ಮೆ
ನಿನ್ನ ಕಣ್ಣ ಕೊಳದಲ್ಲಿ
ಕಳವಳದ ಹನಿಯೊಂದ ಕಂಡಿದ್ದರೆ
ಕಾಂತಾರದಲಿ ಕರೆವ ಕಾರ್ಗಪ್ಪಿನಲಿ
ನಡೆವ ನಿನ್ನಡಿಗೆ ನನ್ನ ಕಣ್ಣ ಕೊಡುತ್ತಿದ್ದೆ
ನನ್ನ ಮನ ಹಿಂಡಿ
ತಪತಪನೆ ಸುರಿವ ನೆತ್ತರಿನಲ್ಲಿ
ಭ್ರಾತೃ ಧರ್ಮದ ನಕ್ಷೆ ಕೊರೆದ ಅರ್ಘ್ಯ,
ಹೆಣ್ಣ ಮೂಗು ಮೊಲೆ ಕೊಯ್ದ ನೆತ್ತರಿನಲ್ಲಿ
ನನ್ನ ಕಣ್ಣೊಮ್ಮೆಯೂ ಕಾಣಲಿಲ್ಲವೆ ನಿನಗೆ?

7

ಸರಯೂ,
ಎಷ್ಟು ಕ್ರೂರಿಯೇ ನೀನು,
ಹದಿನಾಲ್ಕು ವರುಷಗಳಿಂದ ಜುಳುಜುಳು
ಹರಿಯುತ್ತಲೇ ಇರುವಿ
ನನ್ನ ಮೈಯೊಳಗೊಂದು ಹಸಿರು ಹಾವಾಗಿ
ಮುಳಲ ಕಣ ಕಣಗಳಲಿ
ಕುದುರೆ ಖುರಪುಟದ ಬರೆ ಬರೆಯುತ್ತ
ನನ್ನೊಳಗ ಹಲವರಿವ ಹುಡುಗಿಯ
ಹರಿಯುತ್ತ ಹರಿಯುತ್ತ ನೀನೆತ್ತ ಒಯ್ದೆ?

8

ಆಕಾಶ ಸುರಿಸಿದ ಬೆವರ ಹುಂಡಿಗೆ
ಭುವಿಯು ಬಸಿರಲ್ಲಿ ಜೀವ ಪ್ರಸವದ ಕಾವು
ನಾ ಮಾತ್ರ ಹಸಿರಿಲ್ಲ ಬಸಿರಿಲ್ಲ
ಜೀವದುಸಿರಿಲ್ಲ–ಉರಿವ ಇಳೆ ಊರ್ಮಿಳೆ
ಮೂಳೆ ಮಾಂಸದ ದೇಹಕ್ಕಿಂತ
ರತ್ನ ಖಚಿತ ಸಿಂಹಾಸನ ಎಷ್ಟೊಂದು ಗಟ್ಟಿ!
ಹೀಗೆ ಕುಳಿತರೆ ಹೇಗೆ?
ಇಕ್ಷ್ವಾಕು ವಂಶದ ಸೊಸೆ!
ತಳಿಗೆ ಬಟ್ಟಲ ಹಿಡಿದು ತಲೆಬಾಗಬೇಕು.

೧೫ನೇ ಪುಟದಿಂದ

ಗಲೀ ಅಥವಾ ಕ್ರಾಂತಿಯ ಸಂದರ್ಭದಲ್ಲಾಗಲೀ ಅಷ್ಟೊಂದು ಆಳವಾಗಿ ಗಣಿಸಲ್ಪಟ್ಟಿರುವುದಿಲ್ಲ. ಈ ಪ್ರಶ್ನೆಗಳು ರಾಷ್ಟ್ರೀಯ ಹಿತಾಸಕ್ತಿಯ ದೃಷ್ಟಿಯಿಂದಾಗಿ ತಮ್ಮ ಮಹತ್ವವನ್ನೇ ಕಳೆದುಕೊಂಡು ಬಿಡತ್ತವೆ.

ಕ್ರಾಂತಿಯ ನಂತರದ ಸಂದರ್ಭದಲ್ಲಿ ಸಾಮಾಜಿಕ ಉತ್ಪಾದನೆಯಲ್ಲಿ ಮಹಿಳೆ ಭಾಗವಹಿಸುವುದನ್ನು ರಾಷ್ಟ್ರದ ಹಿತಾಸಕ್ತಿಯ ದೃಷ್ಟಿಯಿಂದ ಪ್ರೋತ್ಸಾಹಿಸಲಾಗುತ್ತದೆ. ಹೀಗೆ ಸಾಮಾಜಿಕ ಉತ್ಪಾದನೆಯಲ್ಲಿ ಮಹಿಳೆ ಭಾಗವಹಿಸಿದ್ಯಾಗ್ಯೂ ಸಹ ಮಹಿಳೆಯರ ಸ್ಥಿತಿ-ಗತಿಯೇನೂ ಸುಧಾರಿಸುವುದಿಲ್ಲ. ಕ್ಯೂಬಾದಲ್ಲಿ ಕರೆಯುವ ಹಾಗೆ ಹೊರಗೆ ದುಡಿಯುವ ಮಹಿಳೆಯ "ಡಬಲ್ ಶಿಪ್ಟ್" ಅನಿವಾರ್ಯ. ವ್ಯವಸಾಯ, ಕಾರ್ಖಾನೆ ಇತ್ಯಾದಿ ಕಡೆಗಳಲ್ಲಿ ದುಡಿಯುವ ಹೆಂಗಸರು ತಮ್ಮ ತಮ್ಮ ಮನೆಕೆಲಸಗಳನ್ನೂ ಸಹ ನೋಡಿಕೊಳ್ಳಲೇ ಬೇಕಾಗುತ್ತದೆ.

ಈ ರೀತಿಯ ಎರಡು—ಪಾಳಿಯ ಕೆಲಸದಿಂದಾಗಿ ಮಹಿಳೆಯ ಮೇಲೆ ಆರ್ಥಿಕ ಶೋಷಣೆ ಮಾತ್ರವಲ್ಲ. ಆಕೆಯ ರಾಜಕೀಯ ಪಾಲ್ಗೊಳ್ಳುವಿಕೆಯ ಸಾಮರ್ಥ್ಯವನ್ನು ಕಸಿದುಕೊಳ್ಳುತ್ತದೆ. ಕಾನೂನುಗಳಲ್ಲಿ ಅನೇಕ ಬದಲಾವಣೆಯನ್ನು ತಂದಿದ್ದರೂ ಸಹ ದಿನ ನಿತ್ಯ ಜೀನನದಲ್ಲಿ ನಡೆಯುವ ಸ್ತ್ರೀಯ ಶೋಷಣೆಯನ್ನು ಬದಲಾಯಿಸುವ ಯಾವುದೇ ಪ್ರಯತ್ನವೂ ನಡೆಯುತ್ತಿಲ್ಲ. ಸಾಮಾಜಿಕ ಉತ್ಪಾದನೆಯಲ್ಲಿ ಸ್ತ್ರೀಯರನ್ನು ಸೆಳೆಯುವ ಮೂಲಕ ಸ್ತ್ರೀಯರ ಜೀವನದಲ್ಲಿ ಬದಲಾವಣೆಗಳನ್ನು ತರಲು ಪ್ರಯತ್ನಿಸಿದೆ. ಆದರೆ ಪುರುಷರನ್ನು ಮನೆಗೆಲಸಕ್ಕೆ ತೊಡಗಿಸುವಂತಹ ಯಾವ ಪ್ರಯತ್ನಗಳನ್ನೂ ಸರ್ಕಾರ ಮಾಡುವುದಿಲ್ಲ. ಅಥವಾ ಮನೆಗೆಲಸವನ್ನು ಸಾಮಾಜಿಕ ಉತ್ಪಾದನೆಯಾಗಿ ಪರಿವರ್ತಿಸುವ ಕೆಲಸವನ್ನೂ ಕೂಡಾ ಮಾಡುತ್ತಿಲ್ಲ. ಮನೆಯಲ್ಲಿ ನಡೆಯುವ ಲಿಂಗಾಧಾರಿತ ಶ್ರಮವಿಭಜನೆಯು ಹೊರಗಡೆ ಇರುವ ಕೆಲಸಗಳಲ್ಲೂ ಪ್ರತಿಫಲಿತವಾಗಿ ಹೆಂಗಸರನ್ನು ಯಥಾಪ್ರಕಾರ ಇಡಲು ಪ್ರಯತ್ನಿಸುತ್ತವೆ.

ಕಲಾ

೦ ೦ ೦

## ಸಮಾಧಾನ

ಬೆಟ್ಟದೆತ್ತರ ಆಸೆ ಹೊತ್ತ ಈ ಪುಟ್ಟ ಹೃದಯ
ಬೆಟ್ಟದ ಮೇಲಿನ ಆಗಸವ ಕಂಡು ಬೇಡಿತು,
ನೀನಾದರೂ ನಾಲ್ಕು ಹನಿ ಮಳೆಗರೆಯಬಾರದೆ,
ನನ್ನ ಮನ ತಂಪನ್ನರಸುತ್ತಿದೆ.
ನನ್ನ ಮೈ ಮೇಲೆ ಹಸಿರು ಗಿಡ, ಸಸಿ, ಮರಗಳು,
ಬೆಳೆಯದಿದ್ದರೆ ಬೇಡಾ
ಅವು ನನ್ನ ಹತ್ತಿರ ಬರುವುದೂ ಬೇಡಾ,
ಚಿಕ್ಕ ಹುಲ್ಲಿಗಾದರೂ ಬೇಡವೆ?
ನನ್ನೊಡಲ ಸಾರ.
ಬೇಸಿಗೆ ಬಿಸಿಲ ನೀಲಿ ಆಗಸದಲ್ಲಿ
ಕರಿ ಮೋಡ ಹುಡುಕುವಂತೆ,
ಎಂದೂ ಕಾಣದ ಕೇಳದ ಆ ದೇವನ
ಕೇಳುತಿದೆ ಮನ—ನಾ ಭೂಕಂಪವಾಗಿ
ಸಿಡಿದು ಹೋಗುವ ಮುನ್ನ
ಕರಿ ಮೋಡ ತೇಲಿ ಬಂದು ನಾಲ್ಕು
ಹನಿಗರೆಯಲು ನನ್ನ ಬಳಿ ಬಂದರೆ,
ಯಮುನಂತೆ ಬಿರುಗಾಳಿ ಬೀಸಿ
ತನ್ನೆಡೆಗೆ ಸೆಳೆಯುತ್ತಿದೆ.
ಈ ನನ್ನ ಹುಚ್ಚು ಆಸೆಗಳಿಗೆ
ಕಣ್ಣಿನ್ನಿಂದಿಳಿಯುವ
ತೊಟ್ಟು ಕಣ್ಣೀರೆ ಆಧಾರ.

ಲತಾ ದೇವಿ.

# ಕರ್ನಾಟಕದಲ್ಲಿ ಮಹಿಳೆಯರ ಪ್ರಶ್ನೆ

ಕೇಂದ್ರ ಸರ್ಕಾರ ಹಮ್ಮಿಕೊಂಡಿರುವ ಮಹಿಳಾ ಸಮಖ್ಯ ಸಂಸ್ಥೆಯ ಕಾರ್ಯಕರ್ತೆಯರಾದ ಸಹಯೋಗಿನಿಯರಿಗೆ ಸಮಾಜದ ಹಲವಾರು ಸಮಸ್ಯೆಗಳನ್ನು ಆಳವಾಗಿ ಅರಿಯಲು ಸಾಧ್ಯವಾಗುವಂತಹ ವಿಶ್ಲೇಷಣಾತ್ಮಕ ಚಿತ್ರಣ ಒದಗಿಸುವಂತಹ ಕಾರ್ಯಾಗಾರವೊಂದನ್ನು ಬೆಂಗಳೂರಿನಲ್ಲಿ ಜನವರಿ 27 ರಿಂದ ಫೆಬ್ರವರಿ 2 ರ ವರೆಗೆ ಏರ್ಪಡಿಸಿದ್ದರು. ಈ ಕಾರ್ಯಾಗಾರದಲ್ಲಿ ಕರ್ನಾಟಕದ ಮಹಿಳೆಯರ ಪ್ರಶ್ನೆ ಕುರಿತಾಗಿ ಡಾ| ವಿಜಯಾದಬ್ಬೆಯವರು ಮಾತನಾಡಿದ್ದರು. ಇವರ ಮಾತುಗಳನ್ನು ಸವಿವರವಾಗಿ ಇಲ್ಲಿ ವರದಿ ಮಾಡಿರುವವರು ಡು ಸರಸ್ವತಿ.

**ಮಹಿಳೆಯರ ಪ್ರಶ್ನೆ:** ಮಹಿಳೆಯರ ಪ್ರಶ್ನೆಯ ವಿಶ್ಲೇಷಣೆಯನ್ನು ೧೨ನೇ ಶತಮಾನ, ೧೨ರಿಂದ ೧೯ನೇ ಶತಮಾನ, ೧೯ನೇ ಶತಮಾನದಿಂದ ಈಚೆಗೆ ಎಂದು ನಾಲ್ಕು ಘಟ್ಟಗಳಲ್ಲಿ ನೋಡಬಹುದು.

**೧೨ನೇ ಶತಮಾನ:** ಇಲ್ಲಿ ಸಾಂಸ್ಕೃತಿಕ, ಚಾರಿತ್ರಿಕ ದಾಖಲೆಗಳ ಮೂಲಕ ಹೆಂಗಸಿನ ಸ್ಥಿತಿಯನ್ನು ಕಾಣಬಹುದು. ಆ ಶತಮಾನದ ಶಾಸನಗಳು, ಕಾವ್ಯಗಳು ಇನ್ನಿತರ ಸಾಹಿತ್ಯಿಕ ಕೃತಿಗಳೇ ಆಧಾರವಾಗಿ ಪರಿಗಣಿಸಬೇಕು. ವಡ್ಡಾರಾಧನೆ ಪ್ರಾಚೀನ ಗದ್ಯ ಕಾವ್ಯ — ಈ ಕೃತಿಯಲ್ಲಿ ಬರುವ ಜಯಘಂಟೆಯ ಕಥೆಯಲ್ಲಿ ಹೆಣ್ಣಿನ ಸ್ಥಿತಿಯನ್ನು ಕಾಣಬಹುದು. ನಂದಿಮಿತ್ರ ಒಬ್ಬ ಕೆಲಸದಾಳು. ಬಲಶಾಲಿಯಾದ ಇವನನ್ನು ಜಯಘಂಟೆಯ ಗಂಡ ಕೆಲಸಕ್ಕೆಂದು ಕರೆತರುತ್ತಾನೆ. ಅವನೊಂದಿಗೆ ಅವಳು ಹೇಗಿರಬೇಕೆಂದು ಹೇಳುವಾಗ ಅವನು ಬಯಸಿದ್ದಕ್ಕಿಂತ ಕಮ್ಮಿ ಅನ್ನ ವಿಕ್ಕು ಎಂದು ಆಜ್ಞಾಪಿಸುತ್ತಾನೆ. ಒಂದು ಹಬ್ಬದ ದಿನ, ಹಬ್ಬದ ದಿನವಾದರೂ ಹೊಟ್ಟೆ ತುಂಬ ಅನ್ನವಿಕ್ಕುವ ಎಂದು ಹೆಚ್ಚು ಊಟ ನೀಡುತ್ತಾಳೆ. ಹೆಚ್ಚು ಅನ್ನ ಉಂಡ ಆಳು ಮುಂದೊಂದು ದಿನ ಬಟ್ಟೆಕೊಳ್ಳಲು ಕಾಸನ್ನು ಕೇಳುತ್ತಾನೆ. ಇಲ್ಲವೆನ್ನಲಾಗದೆ ಆಕೆ ಹೆದರುತ್ತಲೇ ಹಣ ನೀಡುತ್ತಾಳೆ. ಮುಂದೆ ವಿಷಯ ತಿಳಿದ ಗಂಡ ಆಕೆ ಮಾಡಿದ್ದು ಅಪರಾಧವೆಂದು ಆಕೆಯನ್ನು ಹೊಡೆದು ಕೊಲ್ಲುತ್ತಾನೆ.

ಪಂಪ ಹೇಳುತ್ತಾನೆ—ಮನಮಂಜಿ ಬರ್ಚಿ ಬೆವರಯ್ — ಹೆಣ್ಣು ಮನೆಯವರಿಗೆಲ್ಲ ಬೆಚ್ಚಿ, ಬೆದರಿ ಬಾಳಬೇಕೆಂದು,

ಶ್ರುತಕೀರ್ತಿಯ ವಿಜಯ ಕುಮಾರಿ ಚರಿತೆಯಲ್ಲಿ ಮದುವೆಯಾದ ಹೆಣ್ಣಿಗೆ ಹೇಳುವ ಮಾತಿದು—ಮನಸ್ಸನ್ನು ತಿಳಿದು, ಹೆದರಿ ನಡೆಯಬೇಕು. ಗಂಡ ಏನು ಹೇಳಲಿ ಸಿಟ್ಟು ಮಾಡಿಕೊಳ್ಳಬೇಡ. ಪುಣ್ಯಧರನಾದ ಮಗನನ್ನು ಪಡೆದು ಪಟ್ಟದ ರಾಣಿಯಾಗು, ಹಿರಿಯರಿಗೆ ಅಂಜಿ ಬದುಕು.

ಆಗ ಜಾರಿಯಲ್ಲಿದ್ದ ವೈದಿಕ ಧರ್ಮದಲ್ಲಾಗಲಿ, ದಿಗಂಬರ ಜೈನ ಪಂಥದಲ್ಲಾಗಲಿ ಹೆಣ್ಣಿನ ಬಗ್ಗೆ ನಕಾರಾತ್ಮಕ ಧೋರಣೆಯಿರಲಿಲ್ಲ. ಜೈನ ಧರ್ಮದ ಪ್ರಕಾರ ಹೆಂಗಸಿಗೆ ಮುಕ್ತಿ ಇಲ್ಲ. ಅವಳು ಪುಣ್ಯ ಕೆಲಸಗಳನ್ನು ಮಾಡಿ ಗಂಡಸಿನ ಜನ್ಮ ಪಡೆದೆ ಮುಕ್ತಿ ಹೊಂದಬೇಕು. ಕರ್ನಾಟಕದ ಶಾಸನಗಳಲ್ಲಿ ಹೆಣ್ಣಿನ ಬಗ್ಗೆ ಶ್ರೀಮತಿ ಚೆನ್ನಕ್ಕ ಎಲಿಗಾರರು ಅಧ್ಯಯನ ಮಾಡಿದ್ದಾರೆ. ಅವರು ಇಪ್ಪತ್ತು ಸಾವಿರ ಶಾಸನ

ಗಳ(೧೩ನೇ ಶತಮಾನದವರೆಗೆ) ಅಧ್ಯಯನವನ್ನು ಮಾಡಿದ್ದಾರೆ. ಈ ಶಾಸನಗಳ ಸಾರಾಂಶ ಹೇಳುವುದೇನೆಂದರೆ–ಗಂಡಸರ ನಿರೀಕ್ಷೆಗೆ ತಕ್ಕಂತೆ ಇದ್ದ ಸ್ತ್ರೀಯರನ್ನು, ಪತಿವ್ರತೆಯರನ್ನ ಈ ಶಾಸನಗಳಲ್ಲಿ ಹೆಚ್ಚು ಸ್ತುತಿಸಿದ್ದಾರೆ. ಧಾರ್ಮಿಕವಾಗಿ ಉನ್ನತಿಗೇರಿದ ಸ್ತ್ರೀಯರ ಹೆಸರುಗಳು ಶಾಸನಗಳಲ್ಲಿವೆ. ಇಂತಹವನ ತಾಯಿಯೆಂದು ಸ್ತುತಿಸಿದ್ದಾರೆ. ರಾಜಕೀಯ ಶಕ್ತಿಯಿದ್ದ, ಧಾರ್ಮಿಕ ಕ್ರಿಯೆಗಳನ್ನು ಮಾಡಿದ ರಾಣಿಯರ ಸ್ತುತಿ ಇದೆ.

ಆ ಕಾಲದ ಕಾವ್ಯ ಮೀಮಾಂಸಕನಾದ ರಾಜಶೇಖರನ ಪ್ರಕಾರ ವಯಸ್ಸು, ಲಿಂಗ, ಮುಖ್ಯವಲ್ಲ. ಗುಣ ಮುಖ್ಯವಾದುದು. ನಾಗಚಂದ್ರನೆಂಬ ಕವಿ— ರಾಮ ಮತ್ತೆ ಕಾಡಿಗಟ್ಟಿದ ಸೀತೆಯ ಬಗ್ಗೆ ಅನುಕಂಪ ತೋರುತ್ತಾನೆ.

ಇವೆಲ್ಲವನ್ನು ಗಮನಿಸಿದಾಗ ೧೨ನೇ ಶತಮಾನದ ಪೂರ್ವದಲ್ಲಿ ಪಾತಿವ್ರತ್ಯ, ಧಾರ್ಮಿಕ ಆಸಕ್ತಿ, ತಾಯ್ತನಕ್ಕಿದ್ದ ಪ್ರಾಮುಖ್ಯತೆ ಕಂಡುಬರುತ್ತದೆ.

೧೨ನೇ ಶತಮಾನ: ಮುಖ್ಯವಾದ ಅಂಶ ವೀರಶೈವ ಚಳವಳಿ. ೧೧೬೦ರ ಸುಮಾರಿಗೆ ೨೦-೩೦ ವರ್ಷಗಳ ಕಾಲ ಈ ಚಳವಳಿ ನಡೆಯಿತು. ವಚನಗಳು, ಶರಣೆಯರ ಅನುಭವಗಳು ಈ ಶತಮಾನದ ಸ್ತ್ರೀಯ ಸ್ಥಿತಿಗೆ ಆಧಾರವಾಗುತ್ತವೆ. ಆಧ್ಯಾತ್ಮಿಕ ಸಾಧನೆಗೆ ಹೆಣ್ಣಿನ ದೇಹ ಅಡ್ಡ ಬರುವುದಿಲ್ಲ ಎಂಬ ಗಮನೀಯ ಅಂಶವನ್ನು ಈ ಆಧಾರಗಳಲ್ಲಿ ಕಾಣಬಹುದು. ಈ ಅಂಶ ಕೆಲವು ಸಾಮಾಜಿಕ ಕಟ್ಟುಪಾಡುಗಳನ್ನು ಮುರಿಯಲು ಸಾಧ್ಯವಾಯಿತು. ಎಲ್ಲವನ್ನೂ ತೊರೆದು ಬತ್ತಲಾಗಿ ಬಂದ ಅಕ್ಕನನ್ನು ಅನುಭವ ಮಂಟಪದಲ್ಲಿ ಅನೇಕ ಪ್ರಶ್ನೆಗಳನ್ನು ಕೇಳುತ್ತಾರೆ. ಬಿಟ್ಟು ಬಂದರೂ ಅವಳನ್ನು ಗಂಡ ಹಿಂಬಾಲಿಸಿದ ದೃಷ್ಟಾಂತವಿದೆ. ಅಕ್ಕ–ಶರಣೆಯಾದ್ದರಿಂದ, ಅಸಂಭಾವಿಯಾದ್ದರಿಂದ ಮದುವೆಯಂತಹ ಸಂಸ್ಥೆಯನ್ನು ಹರಿದು ಬಂದರೂ ಆಕೆ ಸ್ವೀಕರಿಸಲ್ಪಟ್ಟಳು, ಬೇರೆ ವಚನಕಾರರು ಅಕ್ಕನ ಸಾಧನೆಯನ್ನು ಸ್ತುತಿಸಿದ ದಾಖಲೆಗಳಿವೆ. ಬೇರೆ ವಚನಕಾರ್ತಿಯರು ಅಕ್ಕನ ಸಾಧನೆಯನ್ನು ಹೊಗಳಿರುವುದು ಕಾಣಸಿಗುವುದಿಲ್ಲ. ವಚನಗಳ ಮೂಲಕ ಮಾತಾಡುವಂತಹ ಸ್ಥಿತಿಯನ್ನು ಸ್ತ್ರೀಯರು ತಲುಪಿದ್ದು ಗಮನಿಸಬೇಕಾದ ವಿಷಯ— (೩೦ ಜನ ವಚನಕಾರರಿಗೆ ೩೦ ಜನ ವಚನಕಾರ್ತಿಯರಿದ್ದರೆಂದು ತಿಳಿದಿದೆ) ಅಧಾರ್ಮಿಕ ವಾದವನ್ನು ಟೀಕಿಸಿರುವುದನ್ನು ವಚನಗಳಲ್ಲಿ ಕಾಣಬಹುದು, ಸೂಳೆ ಕಾಯಕದ, ಸೂಜಿಕಾಯಕದ, ಕನ್ನಡಿ ಕಾಯಕದ ಹಾಗೂ ಇನ್ನಿತರ ವೃತ್ತಿಗಳಿಂದ ಬಂದವರೂ ವಚನ ರಚಿಸಿದ್ದಾರೆ. ಮಹಿಳೆಯರ ಧಾರ್ಮಿಕವಾದಂತಹ ಸಾಧನೆಗಳನ್ನು ಈ ವಚನದಲ್ಲಿ ಗುರುತಿಸಬಹುದು.

೧೨ರಿಂದ ೧೯ನೇ ಶತಮಾನ: ವೀರಶೈವರ ಚಳವಳಿಯು ಸ್ಥಗಿತವಾಗಿ ಒಂದು ಸಂಸ್ಥೆಯಾಗಿ ಮಾರ್ಪಟ್ಟಿತ್ತು. ಸ್ವಲ್ಪ ಮಟ್ಟಿಗೆ ಚಳವಳಿಯ ಸಂದರ್ಭದಲ್ಲಿ ಜಡತ್ವವನ್ನು ಮೀರಿದ ಮಹಿಳೆಯರು ಮತ್ತೆ ಸ್ಥಗಿತಗೊಂಡರು. ಮಹಮದೀಯರ ಆಳ್ವಿಕೆಯಿಂದಾಗಿ ಮಹಿಳೆಯರನ್ನು ಹೆಚ್ಚು ಸಂರಕ್ಷಿಸಬೇಕೆನ್ನುವ ಧೋರಣೆಯಿತ್ತು. ಮುಂದೆ ಕ್ರೈಸ್ತ ಧರ್ಮದ ಸಂಪರ್ಕದಿಂದ, ಬ್ರಿಟಿಷರ ಆಳ್ವಿಕೆಯಿಂದ ಅನೇಕ ಬದಲಾವಣೆಗಳಾದವು. ಹೊಸ ಶಿಕ್ಷಣ, ಹೊಸ ಮೌಲ್ಯಗಳು ಹಾಗು ಇನ್ನೊಂದು ಧರ್ಮೀಯರಿಂದ ಬಂದ ಟೀಕೆಗಳು(ನಮ್ಮ ಧರ್ಮದ ಬಗ್ಗೆ) ಇಲ್ಲಿನ ಕೆಲವು ವ್ಯಕ್ತಿಗಳನ್ನು ಕ್ರಿಯಾಶೀಲರನ್ನಾಗಿ ಮಾಡಿತು. ಸಮಾಜ ಸುಧಾರಕರು ಕೆಲವು ಸುಧಾರಣಾ ಕ್ರಮಗಳನ್ನು ಕೈಗೊಂಡರು. ಇವರಲ್ಲಿ ಪ್ರಮುಖರು ರಾಜಾರಾಂ ಮೋಹನ್‌ರಾಯ್, ಈಶ್ವರಚಂದ್ರ ವಿದ್ಯಾಸಾಗರ ಹಾಗೂ ಇನ್ನೂ ಕೆಲವರು. ಈ ಕಾಲದಲ್ಲಿ ತಮ್ಮ ಪಾಂಡಿತ್ಯದಿಂದ ಮೇಲೆ ಬಂದ ಪಂಡಿತ ರಮಾಬಾಯಿ, ಕಮಲಾದೇವಿ ಚಟ್ಟೋಪಾಧ್ಯಾಯರಂತ ಮಹಿಳೆಯರನ್ನು ಗುರುತಿಸಬಹುದು. ಪಂಡಿತ ರಮಾಬಾಯಿಯವರು ಸಂಸ್ಕೃತ ಕಲಿಯುತ್ತಿದ್ದಾರೆಂದು ಬಹಿಷ್ಕಾರಕ್ಕೊಳಪಟ್ಟರು. ಆದರೆ ಆಕೆಯ ಪಾಂಡಿತ್ಯವನ್ನು ಗುರುತಿಸಿ ಕಾಶ್ಮೀರ, ಅಸ್ಸಾಮಿನವರು ಪಂಡಿತ ಪದವಿಯನ್ನು ನೀಡಿದರು, ಮಹಿಳೆಯರಿ

ಗಾಗಿ ಸುಧಾರಣಾ ಕ್ರಮಗಳ ಬಗ್ಗೆ ಚಿಂತಿಸಿದ ರಮಾಬಾಯಿಯವರು ವಿಧವೆಯರಿಗಾಗಿ, ಅಸಹಾಯಕರಿಗಾಗಿ ಆಶ್ರಮ, ಶಾಲೆಗಳನ್ನು ತೆರೆದರು. ಧಾರವಾಡದಲ್ಲಿ "ವೀರಮಾತೆ" ಪತ್ರಿಕೆಯನ್ನು ಪ್ರಾರಂಭಿಸಿದರು. ಆರ್. ಕಲ್ಯಾಣಮ್ಮನವರು "ಸರಸ್ವತಿ" ಪತ್ರಿಕೆಯನ್ನು ತಿರುಮಲಾಂಬರವರು "ಕರ್ನಾಟಕ ನಂದಿನಿ" ಯೆಂಬ ಪತ್ರಿಕೆಯನ್ನು ಮಹಿಳೆಯರಿಗಾಗಿ ತಂದರು. ಮಹಿಳೆಯರ ಸಮಸ್ಯೆಯನ್ನು ಎತ್ತಿ ಹಿಡಿಯುವ, ಮಹಿಳಾ ಶಿಕ್ಷಣ ಪ್ರಾಮುಖ್ಯತೆಯನ್ನು ಗುರುತಿಸುವಂತಹ ಪ್ರಯತ್ನವನ್ನು ಪತ್ರಿಕೆಗಳ ಮುಖಾಂತರ ಮಾಡಿದರು. ಅವರು ತೆಗೆದುಕೊಂಡ ವಿಷಯಗಳನ್ನು ಗಮನಿಸಿದರೆ (ವಿಧವೆಯರ ಕೇಶ ಮುಂಡನವನ್ನು ವಿರೋಧಿಸುವಂತಹ) ಮೂರ್ತ ರೂಪದಲ್ಲಿ ಮಹಿಳೆಯರ ಸಮಸ್ಯೆಯನ್ನು ನಿವಾರಿಸಲು ಪ್ರಯತ್ನಿಸಿದರೆನ್ನುವುದನ್ನು ಕಾಣಬಹುದು. ಗಾಂಧೀಜಿಯವರಿಂದ ಪ್ರಭಾವಿತರಾದ ಮಹಿಳೆಯರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಜೈಲಿಗೂ ಹೋದ ಸಂದರ್ಭಗಳಿವೆ. ಕೆಲವರು ಗಾಂಧೀಜಿಯ ಆಶ್ರಮವನ್ನೇ ಸೇರಿದರು. ಸರೋಜಿನಿ ನಾಯ್ಡು, ವಿಜಯಲಕ್ಷ್ಮಿ ಪಂಡಿತರನ್ನು ಅನುಕರಿಸುವಂತಹದ್ದನ್ನು ಕಾಣಬಹುದು.

ಮತ ಹಾಕುವ ಹಕ್ಕು, ಮಹಿಳಾ ಶಿಕ್ಷಣ ಬೇಕು, ಸತಿ ಪದ್ಧತಿ ಹೋಗಬೇಕು, ವರದಕ್ಷಿಣೆ ಹೋಗಬೇಕು ಎಂದು ಮಾಡಿದಂತಹ ಸುಧಾರಣಾ ಚಳವಳಿಗಳು ಮಹಿಳಾ ಸಮಸ್ಯೆಗಳನ್ನೆ ಕೇಂದ್ರವಾಗಿಟ್ಟುಕೊಂಡು ನಡೆಸಿದಂತಹ ಚಳುವಳಿಗಳು.

೧೯ ನೇ ಶತಮಾನದಿಂದೀಚೆಗೆ: ಮಹಿಳಾ ಚಳವಳಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮಹಿಳೆಯರ ಪ್ರಶ್ನೆಯ ಬಗ್ಗೆ ಯೋಚಿಸಬಹುದು. ಮಹಿಳಾ ಚಳವಳಿಗಳು ಮಹಿಳೆಯರ ಸಮಸ್ಯೆಗಳನ್ನು, ತುಳಿತಗಳನ್ನು ಕೇಂದ್ರವಾಗಿಟ್ಟುಕೊಂಡು ಮಾಡಿದಂತಹ ಚಳವಳಿಗಳು. ಅನೇಕ ಚಳವಳಿಗಳಲ್ಲಿ ಮಹಿಳೆಯರು ಭಾಗವಹಿಸಿದ್ದಾರೆ. ಚಳವಳಿಯ ಒಂದು ಭಾಗವಾಗಿ ಕೆಲಸ ಮಾಡಿದ್ದಾರೆ. ಚಳವಳಿಯ ನಂತರ ಅವರ ಸ್ಥಾನ ಯಾವ ಪ್ರಾಮುಖ್ಯತೆಯನ್ನು ಪಡೆಯಲಿಲ್ಲ. ಕೆಲವು ಸಾಮಾನ್ಯ ಉದ್ದೇಶಗಳಿಗಾಗಿ ನಡೆದ ಚಳವಳಿಗಳಲ್ಲಿಯೂ ಮಹಿಳೆಯರು ಪಾಲ್ಗೊಂಡಿದ್ದಾರೆ. ಇಲ್ಲಿಯೂ ಡಿವಿಜನ್ ಆಫ್ ಲೇಬರ್ ಅನ್ನು ಗಮನಿಸಬಹುದು. ವೇತನ ಹೆಚ್ಚಳಕ್ಕಾಗಿ ಗಂಡಸರು, ಬೆಲೆ ಏರಿಕೆಯ ವಿರುದ್ಧ ಮಹಿಳೆಯರು. ಈ ಮಿತಿಗಳಿದ್ದರೂ ಮಹಿಳಾ ಚಳವಳಿಯ ಬೆಳವಣಿಗೆಗೆ, ಸಂಘ ಶಕ್ತಿಯ ಅನುಭವಕ್ಕೆ ಈ ಚಳವಳಿಗಳು ಕಾರಣವಾದವು.

ಮಹಿಳಾ ವಿಮೋಚನಾ ಚಳವಳಿಗಳು:-

ಲಿಂಗಾಧಾರಿತ ಡಿವಿಜನ್ ಆಫ್ ಲೇಬರ್ ಹಾಗು ಪಿತೃಪ್ರಧಾನ ಸಮಾಜದ ವಿರುದ್ಧ ನಡೆದ ಚಳವಳಿಗಳು. ಈ ನಿಟ್ಟಿನಲ್ಲಿ ನಡೆದ ಚಳವಳಿಯಲ್ಲಿ ಮೂರು ರೀತಿಯ ಸ್ತ್ರೀ ವಾದವನ್ನು ಗುರುತಿಸಬಹುದು:

ಲಿಬರಲ್ ಫೆಮಿನಿಸ್ಟ್ಸ್: ಈಗಿರುವ ವ್ಯವಸ್ಥೆಯಲ್ಲಿ ಕೆಲವು ಬದಲಾವಣೆಗಳನ್ನು ತರುವುದರಿಂದ ಮಹಿಳೆಯರ ಸಮಸ್ಯೆಗೆ ಪರಿಹಾರವಿದೆಯೆಂದು ನಂಬುವವರು.

ಸೋಷಿಯಲ್ ಫೆಮಿನಿಸ್ಟ್ಸ್: ಸಮಾಜವಾದಿ ಸ್ತ್ರೀವಾದಿಗಳು- ಸಮಾಜದ ಅನೇಕ ಅನ್ಯಾಯಗಳಲ್ಲಿ ಮಹಿಳೆಯರ ಸಮಸ್ಯೆಯೂ ಒಂದು. ಆರ್ಥಿಕ ಅಸಮಾನತೆಯನ್ನು ತೊಲಗಿಸುವ ಮೂಲಕ ಪರಿಹಾರ ಕಂಡುಕೊಳ್ಳಬಹುದೆಂದು ನಂಬುವವರು.

ರ್‍ಯಾಡಿಕಲ್ ಫೆಮಿನಿಸ್ಟ್ಸ್: ಆಮೂಲಾಗ್ರ ಬದಲಾವಣೆಯನ್ನು ಬಯಸುವ, ಲೈಂಗಿಕ ಆಧಾರದ ಮೇಲೆ ನಡೆಯುವ ತುಳಿತವನ್ನು ಪ್ರತಿಭಟಿಸುವ ಗುಂಪು

೧೯೭೦ ರಿಂದ ಈಚೆಗೆ ಮಹಿಳಾ ಚಳವಳಿಗಳ

ಹೊಸ ಸ್ವರೂಪವನ್ನು ಕಾಣಬಹುದು. ಸಂಘಗಳು, ಸಂಘಟನೆಗಳು ಹುಟ್ಟಿಕೊಂಡಿವೆ. ಇವು ಎಲ್ಲಾ ಸ್ತರದಲ್ಲಿನ ಮಹಿಳೆಯರನ್ನು ಮುಟ್ಟುತ್ತಿಲ್ಲವೆಂಬ ಆಪಾದನೆಯಿದೆ. ತಮ್ಮದೆ ಸ್ಟ್ರಕ್ಚರ್ ಅನ್ನು ಸ್ವತಂತ್ರವಾಗಿ ತಾವೇ ನಿರ್ಮಿಸಿದ್ದನ್ನು ಗಮನಿಸಬಹುದು. ದೇಶದ ಪ್ರಗತಿಗೆ, ಬೆಳವಣಿಗೆಗೆ ಮಹಿಳೆಯರ ಸಹಪಾಲು ಅಗತ್ಯವೆಂದು ಮಹಿಳಾ ಚಳವಳಿಗಳು ನಂಬುತ್ತವೆ.

ಕರ್ನಾಟಕದ ಮಟ್ಟಿಗೆ ಹೇಳಬೇಕಾದರೆ, ಮಹಿಳಾ ಚಳವಳಿ ಸಶಕ್ತವಾಗಿ ಬೆಳೆದಿಲ್ಲ, ಭಿನ್ನ ತಾತ್ವಿಕ ನೆಲೆಯನ್ನಿಟ್ಟುಕೊಂಡು ಸಮಾನವಾದ ಸಮಸ್ಯೆಗಳಿಗೆ ಎಲ್ಲರು ಒಟ್ಟಾಗಿ ಹೋರಾಟ ನಡೆಸುವ ಅಗತ್ಯವಿದೆ, ದೈಹಿಕ ಸ್ವಾತಂತ್ರ್ಯ, ಲೈಂಗಿಕ ಸ್ವಾತಂತ್ರ್ಯ (ಬೇಕಾದ ಸಂಗಾತಿಯನ್ನು ಆಯ್ಕೆ ಮಾಡುವ ಸ್ವಾತಂತ್ರ್ಯ), ಆರ್ಥಿಕ ಸ್ವಾತಂತ್ರ್ಯ, ಕುಟುಂಬದ ಜವಾಬ್ದಾರಿಯನ್ನು ಹಂಚಿಕೊಳ್ಳುವ ಬಗ್ಗೆ, ಮಕ್ಕಳನ್ನು ನೋಡಿಕೊಳ್ಳುವ ಬಗ್ಗೆ ಜವಾಬ್ದಾರಿಯನ್ನು ಹಂಚಿಕೊಳ್ಳುವ ಬಗ್ಗೆ ಮಹಿಳಾ ಚಳವಳಿಗಳು ಗಮನದಲ್ಲಿಟ್ಟುಕೊಳ್ಳುವ ಅಗತ್ಯವಿದೆ.

ಹೆಣ್ತನವನ್ನು, ಗಂಡ್ತನವನ್ನು ಹೆಂಗಸರೂ, ಗಂಡಸರೂ ಇಬ್ಬರೂ ಹೊಂದಿದ್ದೇವೆ. ಹೆಣ್ಣಿನ ದೇಹದಲ್ಲಿದ್ದರೆ ಸಂಪೂರ್ಣ ಹೆಣ್ತನವನ್ನು ಹೊಂದಿರಬೇಕೆಂದು, ಗಂಡಿನ ದೇಹದಲ್ಲಿರುವವರು ಸಹಜವಾಗಿ ಗಂಡ್ತನವನ್ನೇ ಹೊಂದಿರಬೇಕೆನ್ನುವುದು ಪೂರ್ವಗ್ರಹಿತ ಕಲ್ಪನೆ.

ವೈದಿಕ ಸಂಸ್ಕೃತಿ, ಬ್ರಿಟಿಷರ — ಆಕ್ರಮಣಗಳು ನಮ್ಮ ಸಂಸ್ಕೃತಿಯ ಮೇಲೆ ಹೆಚ್ಚು ಪ್ರಭಾವ ಬೀರಿವೆ, ಈ ಎರಡು ವ್ಯವಸ್ಥೆಗಳು ಪಿತೃಪ್ರಧಾನ ವ್ಯವಸ್ಥೆಯನ್ನು ಎತ್ತಿ ಹಿಡಿಯುವಂತಹವು. ಇವು ಅಸಮಾನತೆಗೆ ಮುಖ್ಯ ಕಾರಣಗಳಾಗಿವೆ. ಲೇಖಕಿಯರ ಸಂಘ — ಲೇಖಕಿಯರ ಬಗ್ಗೆ ನಿರ್ಲಕ್ಷ್ಯತನವಿದ್ದ ಸಮಯದಲ್ಲಿ ಪ್ರತ್ಯೇಕ ಸಂಘದ ಅವಶ್ಯಕತೆಯಿದ್ದುದರಿಂದ ಲೇಖಕಿಯರ ಸಂಘ ಸ್ಥಾಪನೆಯಾಯಿತು, ಮಹಿಳಾ ಲೇಖಕಿಯರನ್ನು ಪ್ರೋತ್ಸಾಹಿಸುವ, ಅವರ ಸಮಸ್ಯೆಗಳನ್ನು ತಿಳಿಯುವ, ಅವರ ಕೃತಿಗಳನ್ನು ವಿಶ್ಲೇಷಣೆ ಮಾಡುವ ಕಾರ್ಯಕ್ರಮಗಳನ್ನು ಇಟ್ಟುಕೊಂಡಿದ್ದಾರೆ.

---

ಬಿ. ಟಿ. ಎಸ್. ಬಸ್‌ಗಳಲ್ಲಿ ಮಹಿಳೆಯರಿಗೆ ಸೀಟುಗಳ ಮೀಸಲಾತಿಯನ್ನು ಪ್ರಕಟಿಸಿ ತಿಂಗಳುಗಳೇ ಕಳೆದಿವೆ. ಆದರೆ ಅದರ ಉಪಯೋಗ ಸ್ತ್ರೀಯರಿಗೆ ಎಳ್ಳಷ್ಟು ಆಗಿಲ್ಲವೆಂಬುದು ತೀರಾ ಸ್ಪಷ್ಟ ಅದರಲ್ಲೂ ನಗರದ ಹೊರವಲಯದಿಂದ ಪ್ರಯಾಣಿಸುವ ಮಹಿಳೆಯರು ಬಹಳಷ್ಟು ಕಹಿ ಪ್ರಸಂಗಗಳನ್ನು ಎದುರಿಸಬೇಕಾಗಿದೆ. ಪುರುಷರು ರಾಜಾರೋಷವಾಗಿ ಮಹಿಳೆಯರ ಸ್ಥಳಗಳನ್ನು ಆಕ್ರಮಿಸಿಕೊಳ್ಳುವುದರ ಜೊತೆಗೆ ಸೀಟು ಕೇಳುವ ಮಹಿಳೆಯರನ್ನು ಹೀನಾಮಾನವಾಗಿ ಅವಮಾನಿಸಲಾಗುತ್ತದೆ. ಇದರಿಂದಾಗಿ ಮಹಿಳೆಯರು ಅನಿವಾರ್ಯವಾಗಿ ಮೂಗಿಗಳಾಗಿ ಬಿಡುತ್ತಾರೆ ಇಂತಹ ಅನುಭವಗಳನ್ನು ಅವಮಾನಕರ ಪ್ರಸಂಗವೆಂದು ಭಾವಿಸದೇ ಮಾನಸಕ್ಕೆ ಬರೆದು ಕಳಿಸಿ. ಹೀಗೆ ಅನುಭವಗಳನ್ನು ಹಂಚಿಕೊಳ್ಳುವುದರ ಮೂಲಕ ಹೆಚ್ಚು ಮಹಿಳೆಯರು ಸಂಘಟಿತರಾಗಿ ದನಿ ಎತ್ತಬಹುದು. ಮಹಿಳೆಯರಿಗಾಗಿ ಸ್ಥಳ ಮೀಸಲಾತಿಯು ಯಶಸ್ವಿಯಾಗಬೇಕಾದರೆ ಕೈಗೊಳ್ಳಬೇಕಾದ ಕ್ರಮ, ಸಲಹೆ-ಸೂಚನೆಗಳನ್ನು ಬರೆದು ಕಳಿಸಿ.

ಸಂ. ಮಂ.

## ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ, ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ 20-00 ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇವೆ.

ಸಂ. ಮಂ.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್ ರಾಜೇಶ್ವರಿ, ಮಾನವಿ ಮುದ್ರಣಾಲಯ,
ಪಂಚಾಯತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು—೫೬೦೦೬೭

REGD No KRNA 271

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

PRINTED MATTER




C. G. Manjula.
9, 3rd Cross.
Markham Road.
Ashoka Nagar
Bangalore. 560025.

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067